Photo by D. I. Chanthamian



ಬಹುಮಾನ
ಪಡೆದ ಶೀರ್ಷಿಕೆ

ಮೀನಿಗೆ ಸಾವು

ಕಳಿಸಿದವರು:
ಮಿಸ್. ಪದ್ಮಾವತಿ ಕಾರಂತ್, ದ. ಕ.

# ಈ ಸಂಚಿಕೆಯಲ್ಲಿ







ಶೀಘ್ರದಲ್ಲಿಯೇ ಪ್ರದರ್ಶನವಾಗಲಿದೆ ಮಹಾತ್ಮಾರವರ

# ಸೌಭಾಗ್ಯಲಕ್ಷ್ಮಿ









# SOWBHAGYALAKSHMI

(CANARESE)

*Producer & Director:* **B.V.ACHARYA**

*Songs & Dialogues:* **HUNSUR**

**Await RELEASE**

## A TALLAM RELEASE.

# ಚಂದಮಾಮ

ಇದೇ ಈಗ ಬೇಸಿಗೆರಜೆ ಬಂದಿತ್ತು. ರಜೆಯಲ್ಲಿ ಹಾಯಾಗಿ ಕಾಲಕ್ಷೇಪ ಮಾಡುವುದು ಕೆಲವರ ಅಭ್ಯಾಸ. ಕಾಲಕ್ಷೇಪವೆಂದರೆ ಕಾಲವನ್ನು ಸುಮ್ಮನೆ ಕಳೆಯುವುದು ಎಂದು ಕೆಲವರು ತಿಳಿಯುತ್ತಾರೆ. ಒಂದು ವರ್ಷದಿಂದಲೂ ಓದುತ್ತಾ ಬಂದ ಹಳೇ ಪುಸ್ತಕಗಳನ್ನು ಮೂಲೆಯಲ್ಲಿ ಹಾಕಿ ಆಟದಲ್ಲೇ ಹೊತ್ತು ಕಳೆಯುತ್ತಾರೆ ಕೆಲವರು. ಇನ್ನು ಕೆಲವರಿಗೆ ಪ್ರಯಾಣದ ಕುತೂಹಲ; ಸಾಧ್ಯವಾದಷ್ಟು ಹೊಸ ಹೊಸ ಪ್ರದೇಶಗಳನ್ನು ನೋಡಿ ಅನುಭವ ಪಡೆಯಬೇಕೆಂಬ ಬಯಕೆ. ಇದರಿಂದ ಹೊಸ ಋತುವಿನಲ್ಲಿ ಹೊಸ ಉತ್ಸಾಹದಿಂದ ಹೊರಟ ಹಾಗಾಗುತ್ತದೆ. ಪ್ರಪಂಚ ವಿಖ್ಯಾತರಾದ ಕವಿ ರವೀಂದ್ರರಿಗೆ ಪುಸ್ತಕಕ್ಕಿಂತಲೂ ಪರ್ಯಟನೆಯ ಮೇಲೆಯೇ ಹೆಚ್ಚು ಮೆಚ್ಚು. ವಿಧವಿಧವಾದ ಪ್ರಕೃತಿ ದೃಶ್ಯಗಳನ್ನು ನೋಡುವುದರಲ್ಲಿಯೂ, ಆ ಮೂಲಕ ಆನಂದ ಪರವಶರಾಗುವುದರಲ್ಲಿಯೂ ಅವರು ಹೆಚ್ಚಿಗೆ ಕಾಲವನ್ನು ವಿನಿಯೋಗಿಸಿದ್ದಾರೆ. ಪರ್ಯಟನೆಯಿಂದ ಬರೀ ಆನಂದ ಮಾತ್ರವಲ್ಲ, ಮುಂದಿನ ಜೀವನಕ್ಕೆ ಎಷ್ಟೋ ಪ್ರಯೋಜನ ಕೂಡ ಇದೆ. ನಿಮ್ಮ ರಜಾಕಾಲವನ್ನು ಒಳ್ಳೆಯ ರೀತಿಯಲ್ಲಿ ಕಳೆದಿದ್ದೀರಲ್ಲವೆ?



SANKAR

# ಇರುವೆಗಳು ಮತ್ತು ರಾಜ

ಒಂದೂರಿನಲ್ಲೊಬ್ಬ ರಾಜ
ಆತ ತುಂಬ ಬಲಶಾಲಿ
ಬಡವರ ಪಾಲಿನ ಮಿತ್ರ
ದುಷ್ಟರ ಪಾಲಿನ ಶತ್ರು.

ಖಗಮೃಗಾದಿಗಳ ಭಾಷೆ
ಕ್ರಿಮಿಕೀಟಾದಿಗಳ ಭಾಷೆ
ತಿಳಿದಿರುವುದಾತನಿಗೆ
ತಿಳಿಯದ ಭಾಷೆಯಿಲ್ಲವಾತನಿಗೆ.






ಒಂದು ದಿನವಾತನು
ಪತ್ನಿಪರಿವಾರದೊಂದಿಗೆ
ಅಡವಿಯ ಮಾರ್ಗದಲಿ
ಪಯಣ ಮಾಡುತಲಿದ್ದನು.
ಕಾಣಿಸಿತು ಆತನ ಕಣ್ಣಿಗೆ
ಒಂದು ಇರುವೆಯ ಸಾಲು
ಅವು ಆಡಿಕೊಳ್ಳುತ್ತಿದ್ದ
ಮಾತುಗಳು ಆತನಿಗೆ ಕೇಳಿಸಿತು.
'ರಾಜಪರಿವಾರ ಬಂತು
ನಮಗೆ ಕೇಡುಗಾಲ ಬಂತು
ಕ್ರಿಮಿಕೀಟಾದಿಗಳು ಯಾವಲೆಕ್ಕವವರಿಗೆ
ಮಹಾ ಪ್ರಭುವರ್ಯರವರು.'



" ಕಮಲಾಕರ"

'ಆರ್ತರಕ್ಷಣ ರಾಜ
ಧರ್ಮವೆಂಬದು ಧ್ರುವ
ಸಬಲವಾದುದು ತುಂಬಾ
ಅಬಲರ ರೋದನರವ.'

ಎಂದು ಸರ್ರನೆ ಹಿಂದಿರುಗಿ
ತಾದಾರಿ ತೋರಿಸಿದನು
ಅರಣ್ಯ ರೋದನವಾಗಲಿಲ್ಲವು
ಆ ಪುಟ್ಟ ಇರುವೆಗಳ ಗೋಳು.

ಇರುವೆಗಳ ಮಾತನಾಲಿಸಿದ
ಧೀಮಂತ ಧರಣಿಪತಿಗೆ
ತುಂಬ ಸೋಜಿಗವಾಗಿ ಕಂಡುಬರಲು
ಅದನು ತನ್ನ ಪತ್ನಿಯ ಕಿವಿಗೆ ಹಾಕಿದ.
ಆಕೆ ಅಂದಳು 'ಓಹೋ
ಏನು ಈ ಇರುವೆಗಳ ದಿಮಾಕು
ರಾಜನಂ ನಿಂದಿಪುದೇ
ಅಡಗಿಸಬಾರದೇ ಅದರ ದಿಮಾಕು.'
ಅರಸತಿಯ ಮಾತುಗಳನು ಕಿವಿಯ
ಮೇಲೆ ಹಾಕಿಕೊಳ್ಳಲಿಲ್ಲವು ರಾಜನು
ಕೂಡಲೇ ಹೀಗೆಂದು
ನುಡಿದನಾ ಮಹಾರಾಜನು.



# ಮುಖಚಿತ್ರ



ವೀರಾಧಿ ವೀರನಾದ ದ್ರುಪದರಾಯನನ್ನು ಅರ್ಜುನನು ಗೆದ್ದು, ಕಟ್ಟಿ ಕೊಂಡೊಯ್ದು ಗುರುವಿನ ಕಾಲಿಗೆ ಬೀಳಿಸಿದನಷ್ಟೆ? ದ್ರುಪದನು ಅರ್ಜುನನ ಆ ಪರಾಕ್ರಮಕ್ಕೆ ಮೆಚ್ಚಿದ್ದ. ದ್ರೋಣರಮೇಲೆ ಉರಿ ಕಾರುತ್ತಿದ್ದ—ಆತ ತನ್ನನ್ನು ಅವಮಾನ ಪಡಿಸಿದನೆಂದು. ಆದ್ದರಿಂದ ದ್ರೋಣರನ್ನು ಕೊಲ್ಲುವಂತಹ ಮಗನೂ, ಅರ್ಜುನನನ್ನು ವರಿಸುವಂತಹ ಮಗಳೂ ಹುಟ್ಟ ಬೇಕೆಂದು ವ್ರತಹಿಡಿದ. ಈ ವ್ರತ ಮುಗಿಯುವವರೆಗೆ ರಾಜ್ಯವಾಳುವುದಿಲ್ಲವೆಂದು ಅವನ ಪ್ರತಿಜ್ಞೆ.

ತಪೋವನದಲ್ಲಿ ಋಷಿಗಳ ಮುಂದೆ, ತನ್ನ ಕೋರಿಕೆಯನ್ನು ಕುರಿತು ಹೇಳಿಕೊಂಡ. ಅದಕ್ಕೆ 'ಪುತ್ರಕಾಮೇಷ್ಟಿ' ಎಂಬ ಯಾಗ ಮಾಡಬೇಕು, ಎಂದು ಮುನಿಗಳು ಆದೇಶ ಮಾಡಿದರು. ಅದರಂತೆ ದ್ರುಪದನು ಯೋಗ್ಯವಾದ ಸ್ಥಳವನ್ನು ಗೊತ್ತುಮಾಡಿ ಯಾಗ ಶಾಲೆಯನ್ನು ನಿರ್ಮಿಸಿದನು. ರಾಜಧಾನಿಯಿಂದ ಬೇಕಾದ ಸಾಮಾನುಗಳನ್ನು ತರಿಸಿದನು. ವೇದೋಕ್ತ ವಿಧಿಯಂತೆ ಯಾಗವು ಜರುಗ ತೊಡಗಿತು.

ಹೀಗೆ ಶಾಸ್ತ್ರೋಕ್ತವಾಗಿ ಯಾಗವು ಅನೇಕದಿನ ನಡೆದು, ಪೂರ್ಣಾಹುತಿ ಕೊಡುವಾಗ ಅಗ್ನಿ ಮಧ್ಯದಿಂದ ತೇಜಸ್ವಿಯಾದ ಕುಮಾರನೊಬ್ಬನು ಮೇಲೆದ್ದು ಬಂದನು. ಬಿಲ್ಲು-ಬಾಣ-ಬತ್ತಳಿಕೆಗಳನ್ನು ಧರಿಸಿಕೊಂಡು, ಕವಚ-ಕುಂಡಲಗಳಿಂದಲೇ ಹುಟ್ಟಿ ಬಂದನು. "ಇವನೇ ನಿನ್ನ ಕೋರಿಕೆಯ ಕುಮಾರ, ದೃಷ್ಟದ್ಯುಮ್ನ!" ಎಂದು ಅಶರೀರವಾಣಿಯಾಯಿತು.

ಅನಂತರ ಯಜ್ಞಕುಂಡದಿಂದ ಅಗ್ನಿದೇವನೇ ಪ್ರತ್ಯಕ್ಷನಾಗಿ ನಿಂತನು. ಅವನ ಕೈಯಲ್ಲಿ ಜಾಜ್ವಲ್ಯಮಾನವಾದ ಹೆಣ್ಣುಮಗುವಿತ್ತು! ಕಣ್ಣಿಗೆ ತಣ್ಣಗೆನಿಸುವ, ಕೋಮಲ ಹೂವಿನಂತಹ, ಪುತ್ಥಳಿ ಬೊಂಬೆಯಂತಹ ಆ ಮಗುವನ್ನು ಅಗ್ನಿಪುರುಷನು ದ್ರುಪದನ ಕೈಗೆ ಒಪ್ಪಿಸಿ—"ನಿನ್ನ ಕೋರಿಕೆಯ ಮಗಳು ಇವಳೇ, ದ್ರೌಪದಿ!" ಎಂದು ಹೇಳಿ ಆಶೀರ್ವದಿಸಿ ಮಾಯವಾದನು.

ಹೀಗೆ ಯಾಗವು ಮುಗಿಯಿತು. ದ್ರುಪದನು ದೃಷ್ಟದ್ಯುಮ್ನನನ್ನೂ, ದ್ರೌಪದಿಯನ್ನೂ ಕರೆದುಕೊಂಡು ತನ್ನ ರಾಜ್ಯಕ್ಕೆ ಹೋದನು. ವನವಾಸ ಮಾಡಿದ ಅರಸನು, ಪುತ್ರಪುತ್ರಿಯ ರಿಂದೊಡಗೂಡಿ ರಾಜ್ಯ ಪ್ರವೇಶ ಮಾಡಿದುದನ್ನು ಕಂಡು ಪಾಂಚಾಲ ದೇಶದ ಪ್ರಜೆಗಳಿಗೆಲ್ಲಾ ಬಹಳ ಸಂತೋಷವಾಯಿತು. ನಗರವನ್ನೆಲ್ಲಾ ಅಲಂಕಾರ ಮಾಡಿದರು. ದ್ರುಪದನು ವೈಭವ ದಿಂದ ಕುಮಾರ ಕುಮಾರಿಯರನ್ನು ಬೆಳೆಸುತ್ತಾ, ರಾಜ್ಯಪಾಲನೆ ಮಾಡುತ್ತಿದ್ದ. ದೃಷ್ಟ ದ್ಯುಮ್ನನೂ, ದ್ರೌಪದಿಯೂ ದಿನೇದಿನೇ ಅಭಿವೃದ್ಧಿಗೆ ಬರುತ್ತಿದ್ದರು.



# ತಿಳುವಳಿಕೆಯುಳ್ಳ ಜಿಂಕೆ

ಬ್ರಹ್ಮದತ್ತನು ಕಾಶೀನಗರವನ್ನು ಆಳುತ್ತಿದ್ದ ಕಾಲದಲ್ಲಿ ಒಂದುಸಾರಿ ಬೋಧಿಸತ್ವನು ಜಿಂಕೆಯಾಗಿ ಜನಿಸಿದನು. ಆ ಜಿಂಕೆಯ ಬಣ್ಣ ಹಳದಿಯ ಬಣ್ಣ; ಕಣ್ಣುಗಳು ರತ್ನದಂತೆ ಹೊಳೆಯುತ್ತಿದ್ದುವು; ಗೊರಸುಗಳು ಥಳಥಳಿಸುತ್ತಿದ್ದುವು; ಬಾಯಿ ಬಣ್ಣ ಹಚ್ಚಿದಂತೆ ಕೆಂಪಾಗಿತ್ತು; ಆ ಜಿಂಕೆ ಒಂದು ಆಲದ ಮರದ ಕೆಳಗೆ ವಾಸಿಸುತ್ತಿತ್ತು. ಅದು ಐನೂರು ಜಿಂಕೆಗಳ ಹಿಂಡಿಗೆ ಹಿರಿಯನಾಗಿತ್ತು. ಅದಕ್ಕೆ ಆಲದಮರದ ಜಿಂಕೆ ಎಂದು ಹೆಸರು.

ಆ ಸಮೀಪದಲ್ಲೇ ಅತ್ತಿಮರದ ಕೆಳಗೆ ಮತ್ತೊಂದು ಜಿಂಕೆ ಯಿತ್ತು. ಅದೂಸಹ ಬೋಧಿಸತ್ವನಂತೆಯೇ ಅಂದವಾದ ಜಿಂಕೆ. ಅದರ ಬಣ್ಣಕೂಡ ಬಂಗಾರದ್ದೇ! ಅದರ ಮುಂದಾಳುತ್ವದಲ್ಲೂ ಸಹ ಐನೂರು ಜಿಂಕೆಗಳ ಹಿಂಡೊಂದು ಇತ್ತು. ಅದು ಅತ್ತಿಮರದ ಜಿಂಕೆ.

ಆ ಕಾಲದಲ್ಲಿ ಕಾಶೀರಾಜನಿಗೆ ಬೇಟೆಯಾಡುವುದೇ ಒಂದು ದೊಡ್ಡ ಚಟವಾಗಿತ್ತು. ದಿನಾ ತನ್ನೊಂದಿಗೆ ಬೇಟೆಯಾಡಲು ಬರಬೇಕೆಂದು ಪ್ರಜೆಗಳನ್ನು ನಿರ್ಬಂಧಿಸುತ್ತಿದ್ದನು. ಈ ಒತ್ತಾಯ ಸಹಿಸಲಾರದೆ ಕೆಲವಾರು ಜನ ಸೇರಿ ಈ ವಿಷಯವಾಗಿ ಚರ್ಚಿಸಿದರು.

"ಈ ರಾಜನಿಗೆ ಹಿಡಿದ ಬೇಟೆಯ ಹುಚ್ಚಿನಿಂದ ನಮ್ಮೆಲ್ಲರ ಕೆಲಸಕಾರ್ಯಗಳು ಸುಮ್ಮನೆ ಹಾಳಾಗುತ್ತಿವೆ. ಈ ಸಂದಿಗ್ಧದಿಂದ ಪಾರಾಗಲು, ಮಹಾರಾಜನ ಉದ್ಯಾನವನದಲ್ಲೇ ಜಿಂಕೆಗಳ ಹಿಂಡನ್ನು ತಂದುಬಿಟ್ಟರೆ ತುಂಬಾ ಸಹಾಯವಾಗುವುದಿಲ್ಲವೆ?" ಎಂದು ಅವರಲ್ಲೊಬ್ಬರು ಸೂಚಿಸಿದರು.

ಎಲ್ಲರೂ ಅದಕ್ಕೆ ಸಮ್ಮತಿಯಿತ್ತರು. ಈ ಯೋಚನೆಯಂತೆ ಉದ್ಯಾನವನದಲ್ಲಿ ಹುಲ್ಲು ಬೆಳೆಸಿದರು; ಒಂದು ಕೊಳ ನಿರ್ಮಿಸಿದರು. ಎಲ್ಲಾ ಸಿದ್ಧವಾಯಿತು.

ಜನರೆಲ್ಲಾ ಸೇರಿ ಅಡವಿಗಳಿಗೆ ಹೋಗಿ ಜಿಂಕೆಯನ್ನು ಹಿಡಿಯಲು ಪ್ರಾರಂಭಿಸಿದರು. ಅವರು ಹಿಡಿದ ಜಿಂಕೆಗಳಲ್ಲಿ, ಜಿಂಕೆಗಳ ಹಿಂಡಿನ ಹಿರಿಯವಾದ ಆಲದಮರದ ಜಿಂಕೆ

ಹೆಚ್. ನಾರಾಯಣರಾವ್




ಮತ್ತು ಅತ್ತಿಮರದ ಜಿಂಕೆ ಸಿಕ್ಕಿಕೊಂಡವು. ಆ ಜಿಂಕೆಗಳೆಲ್ಲವನ್ನೂ ಅವರು ಸಿದ್ಧವಾಗಿರಿಸಿದ್ದ ಉದ್ಯಾನವನಕ್ಕೆ ಅಟ್ಟಿಕೊಂಡು ಹೋದರು. ನಂತರ ಉದ್ಯಾನದ ಬಾಗಿಲುಗಳೆಲ್ಲವನ್ನೂ ಬಂಧಿಸಿದರು.

ತರುವಾಯ ಅವರೆಲ್ಲರೂ ರಾಜನ ಹತ್ತಿರ ಹೋಗಿ "ಪ್ರಭೂ, ನಮ್ಮ ಕೆಲಸಗಳು ಕೆಡದಂತೆ ಈ ಕೆಲಸ ಮಾಡಿದೆವು. ದಯವಿಟ್ಟು ಇನ್ನು ಮುಂದೆ ಈ ಜಿಂಕೆಗಳನ್ನು ನಿಮ್ಮಿಷ್ಟದಂತೆ ಬೇಟೆಯಾಡಿ, ಭುಜಿಸಬಹುದು" ಎಂದು ಬಿನ್ನಯಿಸಿಕೊಂಡರು.

ಅವರ ಕೋರಿಕೆಯ ಪ್ರಕಾರ ರಾಜ ಉದ್ಯಾನವನಕ್ಕೆ ಹೋಗಿ ನೋಡಲು ಆತನ ಕಣ್ಣುಗಳಿಗೆ ಬಂಗಾರದ ಬಣ್ಣದ ಎರಡು ಜಿಂಕೆಗಳು ಕಾಣಿಸಿದವು. ರಾಜನಿಗೆ ಅವುಗಳಲ್ಲಿ ಒಂದು ರೀತಿ ಮೋಜು ಉಂಟಾಯಿತು. "ಈ ಎರಡು ಜಿಂಕೆಗಳನ್ನು ಮಾತ್ರ ಕೊಲ್ಲಬಾರದು", ಎಂದು ಆಜ್ಞಾಪಿಸಿದ. ಬೇಟೆಯಾಡಲು ರಾಜ ದಿನಾ ಹೋಗುವನು. ಒಮ್ಮೊಮ್ಮೆ ಅಡಿಗೆಯವನೇ ಹೋಗುವುದೂ ಉಂಟು.

ರಾಜನು ಹೆದೆಗೇರಿಸಿದ ಬಾಣವನ್ನು ಕಂಡಾಕ್ಷಣ ಜಿಂಕೆಗಳು ಭಯದಿಂದ ತಲ್ಲಣಿಸಿ ಚಲ್ಲಾಪಿಲ್ಲಿಯಾಗುತ್ತಿದ್ದುವು. ಏಟು ತಿಂದ ಅನೇಕ ಜಿಂಕೆಗಳು ವಿಲವಿಲ ಒದ್ದಾಡಿ ಪ್ರಾಣ ಬಿಡುತ್ತಿದ್ದುವು. ಒಂದು ದಿನ ಆಲದ ಮರದ ಜಿಂಕೆಯಾದ ಬೋಧಿಸತ್ವನು ಅತ್ತಿಮರದ ಜಿಂಕೆಯನ್ನು ಕುರಿತು ಹೀಗೆಂದನು: "ಮಿತ್ರನೇ, ಈ ಬೇಟೆಯಲ್ಲಿ ಜಿಂಕೆಗಳು ಲೆಕ್ಕವಿಲ್ಲದಂತೆ ಸಾಯುತ್ತಿದ್ದರೆ, ಅನೇಕವು ಪೆಟ್ಟು ತಿಂದು ಬಾಧೆಪಡುತ್ತಿವೆ. ದಿನಾ ಒಂದೊಂದು ಜಿಂಕೆಯಾದರೂ ಸಾಯಲೇಬೇಕಾದುದರಿಂದ ಒಂದು ಸರದಿ ಏರ್ಪಡಿಸೋಣ. ತನ್ನ ಸರದಿ ಬಂದ ಜಿಂಕೆ ನೆಟ್ಟಗೆ ವಧಾಸ್ಥಾನಕ್ಕೆ ಹೋಗಬೇಕು. ಹೀಗಾದರೆ ಮಿಕ್ಕ ಜಿಂಕೆಗಳು ಬಾಣದೇಟಿಗೆ ಗುರಿಯಾಗಬೇಕಾಗುವುದಿಲ್ಲ."

ಈ ಏರ್ಪಾಟು ಅತ್ತಿಮರದ ಜಿಂಕೆಗೆ ಹಿಡಿಸಿತು. ಅದು ಸಮ್ಮತಿಸಿದ ಕೂಡಲೇ ಅಂದಿನಿಂದ ದಿನಾ ಒಂದೊಂದು ಜಿಂಕೆ ವಧಾಸ್ಥಾನಕ್ಕೆ ಹೋಗಿ ಸಿದ್ಧವಾಗುತಿತ್ತು. ಇದರಿಂದ ಹಿಂಡುಗಳಲ್ಲಿದ್ದ ಮಿಕ್ಕ ಜಿಂಕೆಗಳಿಗೆ ದಿನಗಂಡ,



ಕ್ಷಣಗಂಡಗಳು ಸಂಪೂರ್ಣವಾಗಿ ತಪ್ಪಿದುವು. ಹೀಗೇ ಇರಲು ಒಂದು ದಿನ—ಅತ್ತಿಮರದ ಜಿಂಕೆಯ ಹಿಂಡಿನಲ್ಲಿ ಬಸುರಿಯಾಗಿದ್ದ ಒಂದು ಜಿಂಕೆಯು ಸರದಿ ಬಂದಿತು. ಕೂಡಲೇ ಅದು ತನ್ನ ಯಜಮಾನನ ಹತ್ತಿರ ಹೋಗಿ "ನಾನು ತುಂಬಿದ ಬಸುರಿ. ಕೆಲವು ದಿನಗಳು ಕಳೆದರೆ ನಾನೂ ನನ್ನ ಮಗೂ ಸಹ ರಾಜನ ಆಹಾರಕ್ಕೆ ಉಪಯೋಗವಾಗುವೆವು. ಆದುದರಿಂದ ಈಗ ನನ್ನನ್ನು ಬಿಟ್ಟುಬಿಡಿ" ಎಂದು ಪ್ರಾರ್ಥಿಸಿತು.

ಅದಕ್ಕೆ ಅತ್ತೀ ಮರದ ಜಿಂಕೆ "ಥತ್, ಹಾಗೆಲ್ಲಾ ಆಗದು. ಅವರವರ ಕರ್ಮ ಅವರು ಅನುಭವಿಸಲೇಬೇಕು. ನಿನ್ನ ಬದಲಾಗಿ ಮತ್ತೊಬ್ಬರನ್ನು ಕಳುಹಿಸುವುದು ಆಗದ ಮಾತು" ಎಂದು ಖಂಡಿತವಾಗಿ ಹೇಳಿಬಿಟ್ಟಿತು. ಆ ಬಸುರಿ ಜಿಂಕೆ ಬೋಧಿಸತ್ವನ ಹತ್ತಿರ ಹೋಗಿ ಮೊರೆಯಿಟ್ಟುಕೊಂಡಿತು.

ಬೋಧಿಸತ್ವನು ಎಲ್ಲವನ್ನೂ ಕೇಳಿ "ಭಯ ವೇನೂ ಇಲ್ಲ. ನೀನು ಹೋಗು. ನಿನ್ನ ಪ್ರಾಣಕ್ಕೆ ಬದಲಾಗಿ ನನ್ನ ಪ್ರಾಣ ಕೊಡು ವೆನು" ಎಂದು ಸಮಾಧಾನ ಮಾಡಿ ಕಳುಹಿ ಸಿತು. ಆ ಬಸುರಿಜಿಂಕೆ ಹೋದ ಕೂಡಲೇ ಆಲದಮರದ ಜಿಂಕೆ ನೆಟ್ಟಗೆ ವಧಾಸ್ಥಾನಕ್ಕೆ ಹೋಗಿ ತನ್ನ ತಲೆಯನ್ನು ಮರದ ತುಂಡಿನ ಮೇಲಿಟ್ಟು ನಿಂತುಕೊಂಡಿತು.

ಅಲ್ಲಿಗೆ ರಾಜನ ಅಡಿಗೆಯವನು ಬಂದ. ಈ ದೃಶ್ಯನೋಡಿ ಚಕಿತನಾದ. "ಇದೇನಿದು. ಮಹಾರಾಜರು ಜೀವದಾನ ಮಾಡಿದ ಈ




ಬಂಗಾರದ ಜಿಂಕೆ ಹೀಗೇಕೆ ಬಂದು ನಿಂತಿದೆ?" ಎಂದು ರಾಜನ ಹತ್ತಿರ ಹೋಗಿ ಈ ವಿಷಯ ಹೇಳಿದ. ಕೂಡಲೇ ರಾಜ ರಥವನ್ನು ಹತ್ತಿ ತನ್ನ ಪರಿವಾರದೊಂದಿಗೆ ಅಲ್ಲಿಗೆ ಬಂದ. ಬಂದು ಬೋಧಿಸತ್ವನೊಂದಿಗೆ "ಎಲೈ ಜಿಂಕೆ ಗಳ ರಾಜನೇ, ನೀನು ಸ್ವೇಚ್ಛೆಯಾಗಿರಲು ಬಿಟ್ಟಿವೆಷ್ಟೇ. ಈ ರೀತಿ ಒಂದು ಸಾಮಾನ್ಯ ಜಿಂಕೆಯಂತೆ ಬಲಿಯಾಗಲು ಬಂದಿರಲು ಉದ್ದೇಶವಾದರೂ ಏನು?" ಎಂದು ಕೇಳಿದ.

ಅದಕ್ಕೆ ಆಲದ ಮರದ ಜಿಂಕೆ ಅಂದು ಸರದಿಬಿದ್ದ ಬಸುರಿ ಜಿಂಕೆಯ ವಿಚಾರವನ್ನು ವಿಶದೀಕರಿಸಿತು. ಹೃದಯವನ್ನು ಕರಗಿಸು ವಂತಹ ಆ ಜಿಂಕೆಯ ಮಾತುಗಳನ್ನು

ಕೇಳಿ ಬಹಳವಾಗಿ ಮೆಚ್ಚಿಕೊಂಡ ರಾಜ. "ಎಲೈ ಜಿಂಕೆಗಳ ರಾಜನೇ, ನಿನ್ನಂತಹ ಉದಾರ ಚರಿತನನ್ನೂ, ಕರುಣಾಳುವನ್ನೂ, ಪ್ರೇಮಮೂರ್ತಿಯನ್ನೂ ಮಾನವಜಾತಿಯಲ್ಲೂ ಸಹ ನಾನು ನೋಡಿಲ್ಲ. ನಿನ್ನನ್ನೂ ಆ ಬಸುರಿ ಜಿಂಕೆಯನ್ನೂ ಬಂಧವಿಮುಕ್ತರನ್ನಾಗಿ ಮಾಡುವೆನು" ಎಂದ.

"ಮಹಾಸ್ವಾಮಿ, ನಮ್ಮೆರಡು ಪ್ರಾಣಗಳನ್ನು ಮಾತ್ರ ನೀವು ರಕ್ಷಿಸುವುದರಿಂದ ಆಗುವ ಪ್ರಯೋಜನವೇನು. ನಿಮ್ಮ ಆಜ್ಞೆಯ ಪ್ರಕಾರ ಉದ್ಯಾನದಲ್ಲಿರುವ ಒಂದೇ ಒಂದು ಜಿಂಕೆಯ ಪ್ರಾಣ ವುಳಿದಂತಾಯಿತು. ಮತ್ತೆ ಮಿಕ್ಕೆಲ್ಲ ಜಿಂಕೆಗಳ ಮಾತೇನು ಪ್ರಭು?" ಎಂದು ಕೇಳಿತು ಆ ಆಲಮರದ ಜಿಂಕೆ.

"ಅವುಗಳನ್ನೂ ಬಿಟ್ಟುಬಿಡುವೆವು" ಎಂದ ರಾಜ. "ಜಿಂಕೆಗಳನ್ನು ಮಾತ್ರ ಮಹಾರಾಜರು ಬಿಟ್ಟುಬಿಟ್ಟರೆ ಏನಾದಂತಾಯಿತು. ಅಡವಿಯಲ್ಲಿ ಚತುಷ್ಪಾದಿಗಳೆಷ್ಟೋ ಇವೆಯಷ್ಟೇ. ಅವೂ ಜಿಂಕೆಯಂತಹ ಪ್ರಾಣಿಗಳೇ ಅಲ್ಲವೇ? ಅವುಗಳನ್ನುಮಾತ್ರ ರಕ್ಷಿಸಬೇಡವೇ?" ಎಂದು ಮತ್ತೆ ಕೇಳಿತು.

"ಸರಿ, ಅವುಗಳೆಲ್ಲವನ್ನೂ ಬಿಟ್ಟುಬಿಡೋಣ" ಎಂದು ಹೇಳಿದ ರಾಜ. ಅಷ್ಟಕ್ಕೇ ಸುಮ್ಮನಾಗಲಿಲ್ಲ ಆ ಜಿಂಕೆ "ಭೂಪತಿ, ಮರದ ಮೇಲಿರುವ ಪಕ್ಷಿಗಳೂ, ನೀರಿನಲ್ಲಿರುವ ಮೀನುಗಳೂ ಸಹ ನಮ್ಮಹಾಗೆ ಪ್ರಾಣಿಗಳಲ್ಲವೇ? ಜಂತುಗಳನ್ನೂ ಪಕ್ಷಿಗಳನ್ನೂಮಾತ್ರ ಮಹಾರಾಜರು ರಕ್ಷಿಸಿದರೆ ಏನು ಆದಂತಾಯಿತು?" ಎಂದು ಮತ್ತೆ ಕೇಳಿತು.

"ಹೌದು, ನಿನ್ನ ಮಾತುಗಳಲ್ಲಿ ಸತ್ಯವಡಗಿದೆ. ಎಲ್ಲ ಪ್ರಾಣಿಗಳನ್ನೂ ಬಿಟ್ಟುಬಿಡೋಣವಂತೆ" ಎಂದು ವಾಗ್ದಾನ ಮಾಡಿದ.

ಈ ರೀತಿ ಎಲ್ಲಾ ಪ್ರಾಣಿಕೋಟಿಯ ಪಕ್ಷವಹಿಸಿ, ಅವುಗಳನ್ನು ರಕ್ಷಿಸುವೆನೆಂದು ಆತನಿಂದ ಮಾತು ಪಡೆದ ನಂತರ ಬೋಧಿಸತ್ವನು "ರಾಜನೇ, ಧರ್ಮವನ್ನು ಉಳಿಸು. ನ್ಯಾಯವನ್ನು ಪಾಲಿಸು. ಈ ಪ್ರಪಂಚದಲ್ಲಿರುವ ಪ್ರಾಣಿಕೋಟಿ ಎಲ್ಲವನ್ನೂ ದಯೆಯಿಂದ ನೋಡು. ಮುಕ್ತಿಹೊಂದು" ಎಂದು ಎಷ್ಟೋ ನೀತಿಯನ್ನು ಬೋಧಿಸಿದನು. ತರುವಾಯ ಮತ್ತೆ ಅದು ಅಡವಿಯಲ್ಲಿ ತನ್ನ ಸ್ವಸ್ಥಳಕ್ಕೆ ಹೋಗಿ ನಿಶ್ಚಿಂತೆಯಿಂದ ವಾಸಿಸುತಿತ್ತು.






ಇಷ್ಟರಲ್ಲಿ ಎಲ್ಲಿಂದಲೋ ಒಂದು ಬಾಣ ಜುರ್ರೆಂದು ಕಾಲಪಾಶದಂತೆ ಬಂದು ಮುದಿಗಂಗು ಎದೆಯಲ್ಲಿ ಚೊಚ್ಚಿಕೊಂಡಿತು! ಆ ಏಟಿಗೆ ಕುಸಿದುಬಿದ್ದ ಆತ. ಮೃದುಹೃದಯಿ ವಿಜಯವರ್ಮ ಗಂಗೂ ಎದೆಗೆ ಚುಚ್ಚಿಕೊಂಡಿದ್ದ ಬಾಣವನ್ನು ಎಳೆದುಬಿಟ್ಟ. ಪಾಪ, ಗಂಗೂ ಒಂದುಸಾರಿ 'ಅಬ್ಬಾ' ಎಂದು ಚೀರಿ ಪ್ರಾಣಬಿಟ್ಟ. ಕೈಯಲ್ಲಿದ್ದ ಬಾಣವನ್ನು ವಿಜಯವರ್ಮನು ಪರೀಕ್ಷಿಸಿ ನೋಡಿ "ಈ ಬಾಣ ತುಂಬಾ ವಿಚಿತ್ರವಾಗಿದೆ" ಎಂದ. ಆ ಬಾಣದಮೇಲೆ "ಗಂಗೂಗೆ ಶಬ್ದವೇಧಿಯ ಕಾಣಿಕೆ" ಎಂದು ಸಣ್ಣ ಅಕ್ಷರಗಳಲ್ಲಿ ಕೆತ್ತಿದೆ. ಕೆಲವು ನೂರುವರ್ಷಗಳ ಹಿಂದಿನದು ಈ ಶಬ್ದವೇಧಿಯನ್ನು ಕುರಿತ ಈ ಕಥೆ:

---

ಇಂದು ಮಧ್ಯಪ್ರಾಂತವೆಂದು ಕರೆಯಲ್ಪಡುತ್ತಿರುವ ವಿಂಧ್ಯಾಚಲಕ್ಕೆ ಹೊಂದಿಕೊಂಡಿರುವ ನಾಡು ಅಂದು ಚಿಕ್ಕಚಿಕ್ಕ ರಾಜ್ಯಗಳಾಗಿ ವಿಭಜಿಸಲ್ಪಟ್ಟಿದ್ದುವು. ಆಗಾಗಲೇ ಹಿಂದೂ, ಬೌದ್ಧ ಸಾಮ್ರಾಜ್ಯಗಳು ಅಳಿಸಿಹೋಗಿದ್ದವು. ಆದರೆ ಇನ್ನೂ ಮೊಗಲರು ಅಡಿಯಿಟ್ಟಿರಲಿಲ್ಲ. ತುಂಬಾ ತ್ರಾಸದಾಯಕವಾದ ದಿನಗಳವು. ಅಂಕೆಯಲ್ಲಿಡುವವರು ಇಲ್ಲದೆ ಸಣ್ಣಪುಟ್ಟ ಸಾಮಂತರು ತಮ್ಮತಮ್ಮಲ್ಲೇ ಕಾದಾಡುತ್ತಿದ್ದರು. ದೇಶವು ಅರಾಜಕವಾಗಿ, ಅಲ್ಲಕಲ್ಲೋಲವಾಗಿತ್ತು. ಹೋರಿಗಳ ಹೊಡೆದಾಟದಲ್ಲಿ ಕರುಗಳು ನಲುಗಿ ಸಾಯುವಂತೆ ಈ ಪ್ರಭುಗಳ ಕಾದಾಟದಲ್ಲಿ ಪ್ರಜೆಗಳು ನಲುಗಿ ಸಾಯುತ್ತಿದ್ದರು. ಸರಿ, ಇನ್ನು ಜಮಿೀನುದಾರರ, ಜಹಗೀರುದಾರರ ವಿಷಯ ಹೇಳುವುದೇನಿದೆ? ಪ್ರತಿಯೊಬ್ಬರೂ ಒಂದೊಂದು ಸಣ್ಣ ಗುಂಪನ್ನು ಕಟ್ಟಿಕೊಂಡು ಅವುಗಳ ಸಹಾಯದಿಂದ ಜನರನ್ನು ಸುಲಿಗೆ ಮಾಡುತ್ತಿದ್ದರು. ಇದರಿಂದ ಆ ದಿನಗಳಲ್ಲಿ ಯಾವ ಆಶ್ರಯವೂ ಇಲ್ಲದ ಬಡವರಿಗೆ ರಕ್ಷಣೆಯೇ ಇರಲಿಲ್ಲ.




ಅಂದು ವಿಂಧ್ಯಪ್ರದೇಶದ ಸರಿಹದ್ದಿನಲ್ಲಿ ದೊಡ್ಡ ರಾಜ್ಯಗಳೆಂದು ಹೇಳಬಹುದಾದುದು ಎರಡೇ ಇದ್ದವು. ಒಂದು ಬಿಸಲ್‌ಪುರ ರಾಜ್ಯ, ಎರಡನೇಯದು ಕೊಸಲ್‌ಪುರ ರಾಜ್ಯ. ಆ ರಾಜ್ಯಗಳ ಅಧಿಪತಿಗಳಿಬ್ಬರೂ ಸೂರ್ಯ ವಂಶೀಯರು. ಅವರ ತಾಂತಂದಿರು ಅಣ್ಣ ತಮ್ಮಂದಿರ ಪುತ್ರರು. ಯಾವುದೋ ಗೃಹ ಕಲಹ ಬಂದು ಅದುವರೆವಿಗೂ ಒಂದಾಗಿದ್ದ ಬಿಸಲ್‌ಪುರ ರಾಜ್ಯವನ್ನು ಇಬ್ಬರೂ ಸರಿಸಮನಾಗಿ ಹಂಚಿಕೊಂಡರು. ಈ ರೀತಿಯಾಗಿ ಕೊಸಲ್‌ಪುರರಾಜ್ಯ ಜನಿಸಿತು.

ಅಂದಿನಿಂದ ಈ ಎರಡು ರಾಜ್ಯಗಳ ನಡುವೆ ಹಸರು ಹುಲ್ಲು ಹಾಕಿದರೆ ಧಗ್ಗನೆ ಉರಿಯುತ್ತಿತ್ತು. ದಾಯಾದಿಗಳ ಜಗಳ ಅರಿಯದವರ್‍ಯಾರು? ನಮ್ಮ ಕಥೆ ಪ್ರಾರಂಭದಲ್ಲಿ ಒಂದು ದಿನ ಸಾಯಂಕಾಲ ಕೊಸಲ್‌ಪುರದ ಸರಹದ್ದಿನಲ್ಲಿರುವ ಗಿರಿಕೋಟೆಯಲ್ಲಿ ರಣಭೇರಿ ಮೊಳಗಿತು. ಗಿರಿಕೋಟೆ ಕೊಸಲ್‌ಪುರದ್ದೇ ಆದರೂ ಬಿಸಲ್‌ಪುರದ ಸರಹದ್ದನ್ನು ಅಂಟಿಕೊಂಡಿದೆ. ಆ ಕೋಟೆಯ ಯಜಮಾನಿ ಭೀಮವರ್ಮ. ಆತನಾಗ ಕೋಟೆಯಲ್ಲಿ ಇರಲಿಲ್ಲ. ಸೈನಿಕರೊಂದಿಗೆ ರಾಮನಗರಕ್ಕೆ ಹೋಗಿದ್ದ. ಈಗ ಆತನ ಪುರೋಹಿತನೂ, ಅಂತರಂಗಿಕ ಮಿತ್ರನೂ ಆದ ಸೋಮಶರ್ಮನೇ ದುರ್ಗಾಧಿಪತಿ.

ರಣಭೇರಿ ಕೇಳಿದ ಕೂಡಲೇ, ರಾಮನಗರಕ್ಕೆ ಹೋದವರು ಹೊರತು ಕೋಟೆಯಲ್ಲಿ ಉಳಿದಿದ್ದ ಪುರುಷರೆಲ್ಲಾ ಕೆಲಸಬೊಗಸೆಗಳನ್ನು ಅಲ್ಲಲ್ಲೇ ಬಿಟ್ಟು ಮೊಗಸಾಲೆಗೆ ಬಂದು ಸೇರಿದರು. ಅಲ್ಲಿ ೧೭-೧೮ ವರ್ಷ ವಯಸ್ಸಿನ ರಾಹುತನೊಬ್ಬನು ಸಮಸ್ತ ವಿಧವಾದ ಆಯುಧಗಳನ್ನು ಧರಿಸಿ ನಿಂತಿದ್ದಾನೆ. ಆತನೇ ಭೀಮವರ್ಮನು ಸಲಹುತ್ತಿದ್ದ ಯುವಕ. ಆತನ ಹೆಸರು ವಿಜಯವರ್ಮ.

ಹೀಗೆ ನೆರದಿದ್ದ ಪ್ರಜೆಗಳು 'ಏನು ವಿಷಯ' ಎಂದು ಒಬ್ಬರನ್ನೊಬ್ಬರು ಪ್ರಶ್ನಿಸಿಕೊಳ್ಳುತ್ತಿರುವುದನ್ನು ಕಂಡು ಆ ಯುವಕನು ಮತ್ತೆ ಬಿಸಲ್‌ಪುರ, ಕೊಸಲ್‌ಪುರಗಳ ನಡುವೆ ಯುದ್ಧ ನಡೆಯುವುದೆಂದೂ, ಭೀಮವರ್ಮರು ಆಯುಧ ಹಿಡಿಯಬಲ್ಲ ಪ್ರತಿ ಪುರುಷನನ್ನೂ

ಕರೆದುಕೊಂಡು ಬರುವಂತೆ ವಾರ್ತೆ ಕಳುಹಿ ಸಿರುವರೆಂದೂ ಅವರಿಗೆ ತಿಳಿಸಿದ.

ಅಷ್ಟೇ ಅಲ್ಲದೆ ಈ ಸೈನಿಕರ ದಳಕ್ಕೆ ರಾಮ ಸಿಂಗನು ನಾಯಕನಾಗಿರುವನೆಂತಲೂ, ಸೋಮಶರ್ಮರು ಈ ವಿಷಯದಲ್ಲಿ ಸ್ವತಃ ಆಜ್ಞೆಗಳನ್ನು ಕೊಡುವರೆಂತಲೂ ತಿಳಿಸಿದ, ಆ ಯುವಕ.

ಈ ಸುದ್ದಿ ಕೇಳಿ ಜನ ವಿವಿಧರೀತಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು. ದುರ್ಗಾಧಿಪತಿ ಯಾದ ಭೀಮವರ್ಮನೆಂದರೆ ಅವರಿಗೇನೂ ಅಷ್ಟು ಪ್ರೀತಿಯಿಲ್ಲವೆಂದು ಆ ಮಾತುಗಳಿಂದ ಊಹಿಸಬಹುದು. ಇಷ್ಟರಲ್ಲೇ ಕುದುರೆ ಹತ್ತಿ ರಾಮಸಿಂಗು ಅಲ್ಲಿಗೆ ಬಂದ.

ಬಂದ ಕೂಡಲೇ ಆತನು ಹೀಗೆಂದ: "ಎಲ್ಲರೂ ಸಿದ್ಧರಾಗಿ, ಕತ್ತಲಾಗುವಮುನ್ನ ಹೊರಡಬೇಕು." ರಾಮಸಿಂಗ್ ಭೀಮ ವರ್ಮನ ಬಲಗೈಯಿದ್ದಂತೆ. ಆತನ ಆಜ್ಞೆ ಪ್ರಕಾರ ಎಲ್ಲರೂ ಸಿದ್ಧರಾಗ ತೊಡಗಿದರು. ಇಷ್ಟರಲ್ಲಿ ರಾಮಸಿಂಗನು ಅವರಲ್ಲೊಬ್ಬನನ್ನು ಉದ್ದೇಶಿಸಿ 'ಮುದಿಗಂಗು ಎಲ್ಲಿ?' ಎಂದು ಕೇಳಿದ.

"ಪ್ರಾಯಶಃ ಹೊಲದಲ್ಲಿ ಇರಬಹುದು" ಎಂದು ಆ ವ್ಯಕ್ತಿ ಉತ್ತರವಿತ್ತ. ಮುದಿಗಂಗು ಹೊಲ ಊರಾಚೆಯಿದೆ. ವಿಜಯವರ್ಮ, ರಾಮಸಿಂಗರು ಅಲ್ಲಿಗೆ ದೌಡಾಯಿಸಿದರು.

ಮುದಿಗಂಗು ಹೊಲದಲ್ಲಿ ಕೆಲಸ ಮಾಡಿ ಕೊಳ್ಳುತ್ತಾ ಏನೋ ಹಾಡಿಕೊಳ್ಳುತ್ತಿದ್ದ.




ಇವರಿಬ್ಬರು ಬಂದ ಶಬ್ದ ಕೇಳಿಸಲಿಲ್ಲವೇನೋ. ಆತ ತನ್ನ ತಲೆಯೆತ್ತಿಸಹ ಇತ್ತಕಡೆ ನೋಡ ಲಿಲ್ಲ. "ಏನಯ್ಯಾ ಗಂಗು, ನಿನಗೆ ಕರೆ ಬಂದಿದೆ. ಈಗಲೇ ಬಂದು ಕೋಟೆಯಲ್ಲಿರುವ ಸೈನಿಕರ ನಾಯಕತ್ವ ವಹಿಸಬೇಕೆಂದು ಸೋಮಶರ್ಮರ ಆಜ್ಞೆಯಾಗಿದೆ" ಎಂದ ರಾಮಸಿಂಗ್. "ನೀನಿದ್ದೀಯಲ್ಲಪ್ಪಾ" ಎಂದ ಗಂಗು ನಗುತ್ತಾ. "ಆತನಿರುವುದಿಲ್ಲ, ಕೋಟೆಯಲ್ಲಿರುವ ಪುರುಷರನ್ನೆಲ್ಲಾ ಕೂಡಿಸಿ ಕೊಂಡು ರಾಮನಗರಕ್ಕೆ ಹೋಗುತ್ತಾನೆ. ಭೀಮವರ್ಮರು ಹಾಗೆಂತ ಸುದ್ದಿ ಕಳುಹಿಸಿ ದ್ದಾರೆ" ಎಂದ ವಿಜಯವರ್ಮ.

"ಹಾಗಾದರೆ ಮತ್ತೆ ನಾನಿಲ್ಲಿ ಯಾರ ನಾಯ ಕತ್ವ ವಹಿಸಬೇಕು?" ಎಂದ ಮುದಿಗಂಗು.



"ಆರು ಜನ ಸೈನಿಕರೂ, ಸೋಮಶರ್ಮರೂ ಇಲ್ಲಿಯೇ ಇರುತ್ತಾರೆ" ಎಂದ ಸಿಂಗ್. ಆದರೆ ಗಂಗು ಆತನ ಮಾತುಗಳನ್ನು ಕೇಳಲೇ ಇಲ್ಲ.

ಆತ ಸನಿಯದಲ್ಲೇ ಇದ್ದ ಅರಣ್ಯದ ಕಡೆಗೆ ನೋಡುತ್ತಿದ್ದಾನೆ. "ಏನಷ್ಟು ಸೂಕ್ಷ್ಮವಾಗಿ ನೋಡುತ್ತಿರುವೆ?" ಎಂದು ಕೇಳಿದ ಸಿಂಗ್. "ಪಕ್ಷಿಗಳು" ಎಂದ ಗಂಗು ಹಾಗೇ ನೋಡುತ್ತಾ. ಇನ್ನೂರು ಗಜ ದೂರದಲ್ಲಿರುವ ಮಹಾವೃಕ್ಷಗಳ ಮೇಲೆ ಒಂದು ಪಕ್ಷಿಗಳ ಸಮೂಹವು ಚೆಲ್ಲಾಪಿಲ್ಲಿಯಾಗಿ ಹಾರುತ್ತಾ ಅರಚುತ್ತಿವೆ!

"ಪಕ್ಷಿಗಳನ್ನೇನಯ್ಯಾ ನೋಡುತ್ತಿರುವೆ?" ಎಂದ ರಾಮುಸಿಂಗ್. "ಅದೇ ತಿಳಿಗೇಡಿತನ. ಪಕ್ಷಿಗಳೆಂದರೆ ಅರಣ್ಯ ಕಾವಲುಗಾರರಿದ್ದಂತೆ. ಹೊಸಬರು ಯಾರಾದರೂ ಬಂದರೆ ಅವುಗಳ ಅಲಪಿನಿಂದ ನಮಗೆ ತಿಳಿಯುತ್ತದೆ. ಈಗ ಆ ಮರಗಳ ಮೇಲೆ ಶತ್ರುಗಳೇ ಹೊಂಚಿ ಕುಳಿತಿರುವರೆಂದು ಭಾವಿಸು. ಅದು ನಿನಗೆ ತಿಳಿಯುವುದಾದರೂ ಹೇಗೆ?" ಎಂದ ಗಂಗು.

"ಶತ್ರುಗಳು ಎಲ್ಲಿಂದ ಬರ್‍ತಾರಯ್ಯಾ ಇಲ್ಲಿಗೆ? ರಾಮನಗರದಲ್ಲಿರುವ ನಮ್ಮ ಸೈನಿಕರ ಹೊರತು ಹತ್ತಿರದಲ್ಲಿ ಬೇರೆ ಸೈನ್ಯಗಳು ಎಲ್ಲಿವೆ!" ಎಂದ ಸಿಂಗ್. "ಎಲೈ ಹುಚ್ಚಾ, ಭೀಮವರ್ಮನನ್ನೂ ಆತನ ಅನುಚರರನ್ನೂ ಮಟ್ಟಹಾಕಲು ಬೇರೆಲ್ಲಿಂದಲೋ ಬರಬೇಕೇ ಶತ್ರುಗಳು? ಈ ಸುತ್ತಮುತ್ತಲು ನಮ್ಮನ್ನು ದ್ವೇಷಿಸದವರು ಯಾರುಇದ್ದಾರೆ?" ಎಂದ ಗಂಗು.

ರಾಮುಸಿಂಗನ ಬಾಯಿಂದ ಸ್ವಲ್ಪಹೊತ್ತು ಮಾತು ಬರಲಿಲ್ಲ. ಗಂಗು ಹೇಳಿದ್ದು ಸತ್ಯಕ್ಕೆ ದೂರವಾದ ಮಾತಲ್ಲ. "ಸರಿ. ಸರಿ. ಇನ್ನು ಹೊರಡು. ಸೋಮಶರ್ಮನು ಈಗಾಗಲೇ ಉರಿದುಬೀಳುತ್ತಿರಬಹುದು. ಆದರೂ ನಿನ್ನ ಬಾಯಿಗೆ ಕಡಿವಾಣವಿಲ್ಲ" ಎಂದ. ಅಷ್ಟರಲ್ಲಿ ಎಲ್ಲಿಂದ ಬಂತೋ ಒಂದು ಬಾಣ ಜುರ್ರೆಂದು ಕಾಲಪಾಶದಂತೆ ಬಂದು ಮುದಿ ಗಂಗು ಎದೆಯಲ್ಲಿ ಚುಚ್ಚಿಕೊಂಡಿತು! ಆ ಏಟಿಗೆ ಕುಸಿದು ಬಿದ್ದ ಆತ. ರಾಮುಸಿಂಗನು ತಟ್ಟನೆ ಹಾರಿ ಹತ್ತಿರದಲ್ಲೇ ಇದ್ದ ಒಂದು ಬಂಡೆಯ ಹಿಂದೆ ಹೋಗಿ ಅವಿತುಕೊಂಡ. ವಿಜಯವರ್ಮ ತನ್ನ ಧನುಸ್ಸನ್ನು ತೆಗೆದು ಬಾಣವನ್ನು ಹೆದೆಗೇರಿಸಿ ಅರಣ್ಯದಕಡೆ ನೋಡಿದ. ಆದರೆ ಅರಣ್ಯ

ಪ್ರಶಾಂತವಾಗಿತ್ತು. ಎಲೆಯಾದರೂ ಮಿಸುಕಾಡಲಿಲ್ಲ.

ರಾಮುಸಿಂಗನೂ ವಿಜಯವರ್ಮನೂ ಬಾಧೆಯಿಂದ ಒದ್ದಾಡುತ್ತಿದ್ದ ಗಂಗೂ ಹತ್ತಿರಕ್ಕೆ ಹೋದರು. ಮೃದುಹೃದಯಿ ವಿಜಯವರ್ಮ ಗಂಗು ಎದೆಗೆ ಚುಚ್ಚಿಕೊಂಡಿದ್ದ ಬಾಣವನ್ನು ಎಳೆಯಲು, ಪಾಪ, ಆ ವೃದ್ಧ 'ಅಬ್ಬಾ' ಎಂದು ಚೀರುತ್ತಾ ಪ್ರಾಣಬಿಟ್ಟ.

ಕೈಯಲ್ಲಿದ್ದ ಬಾಣವನ್ನು ವಿಜಯವರ್ಮನು ಪರೀಕ್ಷಿಸಿ "ಈ ಬಾಣ ತುಂಬಾ ವಿಚಿತ್ರವಾಗಿದೆ" ಎಂದ. "ಎಲ್ಲಿ, ನೋಡುವಾ" ಎಂದು ರಾಮುಸಿಂಗನು ಬಾಣವನ್ನು ತೆಗೆದುಕೊಳ್ಳಲು ಕೈಚಾಚಿದ. ವಿಜಯವರ್ಮ ಬಾಣದಮೇಲಿರುವ ರಕ್ತವನ್ನು ಒರೆಸಿ ತೋರಿಸಿದ. ಬಾಣದ ಮೇಲೆ "ಗಂಗುಗೆ 'ಶಬ್ದವೇಧಿ'ಯ ಕಾಣಿಕೆ" ಎಂದು ಸಣ್ಣ ಅಕ್ಷರಗಳಲ್ಲಿ ಕೆತ್ತಿದೆ! "ಶಬ್ದವೇಧಿ? ಯಾರೀ ಶಬ್ದವೇಧಿ? ಕಳ್ಳನ ಹೆಸರಂತೆ ಇದೆಯಲ್ಲಾ. ಸರಿ, ನಮಗೂ ಸಹ ಈ ಗತಿ ಹಿಡಿಯುವವರೆಗೂ ಯಾಕಿರಬೇಕು ಇಲ್ಲಿ? ಗಂಗೂ ಇಲ್ಲದಿದ್ದರೂ ಕಡೆಯಪಕ್ಷ ಆತನ ಶವವನ್ನಾದರೂ ತೆಗೆದುಕೊಂಡು ಹೋಗುವ, ಬಾ" ಎಂದ ರಾಮುಸಿಂಗ್.

ಇಬ್ಬರೂ ಸೇರಿ, ಗಂಗು ಶವವನ್ನು ಹತ್ತಿರದಲ್ಲೇ ಇದ್ದ ಆತನ ಮನೆಗೆ ಹೊತ್ತುಕೊಂಡು ಹೋದರು. ಕೂಡಲೇ ಸೋಮುಶರ್ಮನಿಗೆ ಸುದ್ದಿ ಹೋಯಿತು. ಆತನು ತುಸ ಸಮಯಕ್ಕೆಲ್ಲಾ ಅಲ್ಲಿಗೆ ಬಂದ. "ಏನು, ಏನು



ನಡೆಯಿತು" ಎಂದು ಕೇಳಿದ. "ಇನ್ನೇನು ನಡೆಯಬೇಕು. ಗಂಗೂನ ಕೊಂದರು" ಎಂದ ರಾಮುಸಿಂಗ್.

ಈ ವಾರ್ತೆ ಕೇಳಿದ ಕೂಡಲೇ ಸೋಮುಶರ್ಮನ ಮೈಯೆಲ್ಲಾ ಬೆಮರಿತು. ಮುಖ ಬಿಳುಪೇರಿತು. ಕಾಲುಗಳು ಗಡಗಡ ನಡುಗಿದುವು. ಆತನು ಅಲ್ಲೇ ಇದ್ದ ಒಂದು ಆಸನದಲ್ಲಿ ಕುಕ್ಕರಿಸಿದ.

"ಇದು ಹೇಗೆ ನಡೆಯಿತು?" ಆತನ ಸ್ವರ ಗದ್ಗದವಾಗಿತ್ತು. ಆಗ ಅತನಿಗೆ ವಿಜಯವರ್ಮ ಆ ಬಾಣವನ್ನು ತೋರಿಸಿದ. "ಶಬ್ದವೇಧಿ?—ಶಬ್ದವೇಧಿಯ ಹೆಸರಿಂದ ನಾಟಕವಾಡುತ್ತಿರುವ ಈ ಶತ್ರು ಯಾರು? ನಮ್ಮ ಕೆಡಕುಕೋರುವವರು ಬಹಳ ಜನರೇನೋ ಇರುವರು. ಆದರೆ ಇಷ್ಟೊಂದು ಸಾಹಸ



ಯಾರಿಗಿದೆ? ಯಾರೀತ? ಬಾಬೂಸಿಂಗನೇ? ಅಲ್ಲಲ್ಲ. ಪ್ರಮಾರ್ ವಂಶೀಯನೇ? ಇರಲಾರದು. ಮತ್ತೆ ಯಾರಾಗಿರಬಹುದು? ಏನು ಹೇಳುವೆ ರಾಮುಸಿಂಗ್" ಎಂದ ಶರ್ಮ. "ಚಂಡೀದಾಸ ನಿರಬಾರದೇಕೆ?" ಎಂದ ಸಿಂಗ್.

"ಇಲ್ಲ. ಇಲ್ಲ. ಅಂತಹವರಿಗೆ ಇಷ್ಟು ಸಾಹಸ ಇರಲಾರದು. ಇನ್ನೇನು ಯುದ್ಧ ನಡೆಯಲಿದೆ. ಯಾರೋ ಬಿಲಾಸಪುರದವನೇ ಈ ಕಾರ್ಯ ಮಾಡಿರಬೇಕು!" ಎಂದ ಸೋಮಶರ್ಮ. "ನೀವು ಅಸಾಧ್ಯರು. ಎಲ್ಲ ವಿಷಯ ತಿಳಿದೇ ಹೀಗೆ ಹೇಳುವಿರಲ್ಲಾ ಸೋಮಶರ್ಮ! ನಮ್ಮ ಭೀಮವರ್ಮರಿಗೆ ಒಂದು ಪಕ್ಷವೆಂಬುದೇ ಇಲ್ಲವೆಂಬ ವಿಷಯ ಯಾರಿಗೆ ತಿಳಿಯದು? ಲಾಭದಾಯಕವಾದ ಪಕ್ಷ ವಹಿಸುವಾತ! ಶತ್ರುಗಳು ಹೊರಗಿಂದಲೇ ಬರಬೇಕೆ? ಆತ ಎಷ್ಟು ಮನೆಗಳನ್ನು ಹಾಳುಮಾಡಿಲ್ಲ? ಎಷ್ಟು ಘೋರ ಕೃತ್ಯಗಳನ್ನು ಎಸಗಿಲ್ಲ? ಎಷ್ಟು ಪ್ರಾಣಗಳನ್ನು ಬಲಿಗೊಡಲಿಲ್ಲ?....' ಎಂದು ಆವೇಶದಿಂದ ಸಿಂಗ್ ನುಡಿದು ತಟಕ್ಕನೆ ಮಾತು ನಿಲ್ಲಿಸಿದ.

ಸೋಮಶರ್ಮ ಮೆಲ್ಲನೆ ಅಂದ "ನಿನ್ನ ಬಾಯಿ ತುಂಬಾ ದುಡುಕು. ಅದು ಬಹಳ ಕೆಟ್ಟದು ನೋಡು. ಸ್ವಲ್ಪ ಹದ್ದಿನಲ್ಲಿಟ್ಟುಕೋ ಬಾಯಿ, ತರುವಾಯ ಚಿಂತಿಸಿ ಫಲವಿಲ್ಲ." ಹಾಗೇ ಮಾತು ಬದಲಾಯಿಸಿ "ಗಂಗು ಇಲ್ಲ, ನಿನ್ನನ್ನು ಕಳುಹಿಸಿಬಿಟ್ಟರೆ ಆಗದು. ನೀನಿಲ್ಲೇ ಇರಬೇಕು. ಕಾಲಕೆಟ್ಟದು" ಎಂದ.

ಮೂವರೂ ಹೊರಗೆ ಬಂದರು. ಬಂದು ಕುದುರೆಗಳನ್ನೇರಿ ಮೊಗಸಾಲೆಕಡೆ ಹೊರಟರು. ಅಲ್ಲಿ ನೆರೆದಿದ್ದ ಸೈನಿಕರನ್ನು ನೋಡಿದ ಕೂಡಲೇ ಸೋಮಶರ್ಮನಿಗೆ ತುಸ ಸಮಾಧಾನವಾಯಿತು. "ಪರವಾಯಿಲ್ಲ. ಭೀಮವರ್ಮರು ರೊಚ್ಚಿಗೇಳಬೇಕಾದ ಕೆಲಸವಿಲ್ಲ" ಎಂದ. ಇಷ್ಟರಲ್ಲಿ "ಆತನ್ಯಾರು?" ಎಂದು ಸಿಂಗ್ ಬೆಚ್ಚಿಬಿದ್ದ.

ಯಾರೋ ಮೊಗಸಾಲೆಹಿಂದಿನಿಂದ ಓಡಿಹೋಗುವುದು ಕಾಣಿಸಿತು. "ಹಿಡಿಯಿರಿ, ಏನು ದಿಕ್ಕು ನೋಡುತ್ತಿರುವಿರಿ" ಎಂದು ಸಿಂಗು ಕಿರುಚಿ, ಕುದುರೆಯನ್ನು ಅತ್ತ ಕಡೆ ದೌಡಾ

ಯಿಸಿದ. ಬಹಳ ಜನ ಆತನನ್ನು ಅನುಸರಿಸಿದರು. ಆದರೆ ಅವರೆಲ್ಲರಿಗಿಂತ ತಿಳುವಳಿಕೆಯುಳ್ಳ ಕೆಲಸ ಮಾಡಿದ ವಿಜಯವರ್ಮ. ಬಾಣವನ್ನು ಹೆದೆಗೇರಿಸಿಬಿಟ್ಟ. ಆದರೆ ಗುರಿ ಸರಿಯಾಗಿರಲಿಲ್ಲವಾದುದರಿಂದ ಆ ಬಾಣ ಆ ಸವಾರನ ಕುದುರೆಯನ್ನು ತಾಕಿಕೊಂಡು ಹೋಯಿತು.

ಆತ ಅದೃಷ್ಟವಂತ. ಎಲ್ಲರ ಕಣ್ಣು ತಪ್ಪಿಸಿ ಅರಣ್ಯದಲ್ಲಿ ಮಾಯವಾದ. ನಿರಾಶೆಹೊಂದಿ ಹಿಂತಿರುಗಿದರು ಎಲ್ಲಾ. ಇಷ್ಟರಲ್ಲಿ ಸೋಮಶರ್ಮನ ಅನುಚರ ನಾರಾಯಣ "ಇದೇನೋ ನೋಡಿ" ಎಂದು ಒಂದು ಪತ್ರ ತಂದು ಕೊಟ್ಟ. ಅದರಲ್ಲೊಂದು ವಿಚಿತ್ರವಾದ ಪದ್ಯ ಬರೆದಿದೆ. ಸೋಮಶರ್ಮ ಆ ಪದ್ಯ ಓದಲು ಪ್ರಾರಂಭಿಸಿದ.

ನನ್ನ ಹತ್ತಿರವಿರುವುದು ನಾಲ್ಕು ಬಾಣಗಳು<br>
ತುಂಬಾ ಹರಿತವಾದವು, ತೆಗೆಯುವುವು ದುಷ್ಟರ<br>
ಪ್ರಾಣಗಳು.

ಮುದಿಗೂಗು ಪ್ರಾಣ ತೆಗೆಯಿತೊಂದು ಬಾಣ<br>
ಶಾಸ್ತಿ ಆಯಿತು ಆತನಿಗೆ,<br>
ಕ್ರೂರ ರಾಮಸಿಂಗನಿಗಾಗಿ ಇಟ್ಟಿರುವೆ ಒಂದು ಬಾಣ<br>
ಅವನೇ ಅಲ್ಲವೇ ಸೋನಗರವನ್ನು ಸುಟ್ಟ ಸೈತಾನ<br>
ಸೋಮಶರ್ಮನಿಗಾಗಿ ಒಂದು ಬಾಣ ಇಟ್ಟಿರುವೆನು<br>
ಅಭಯವರ್ಮನ ಕತ್ತು ಕತ್ತರಿಸಿದವನಲ್ಲವೇ ಅವನು



ದ್ರೋಹಿ ಭೀಮವರ್ಮನಿಗೆ ಕಾದಿದೆ ನಾಲ್ಕನೇಬಾಣ
ಅವನೇ ಅಲ್ಲವೇ ಯದುವಂಶದ ವಿಷಪುಚ್ಛ
ದ್ರೋಹಿಗಳೇ ನೀವು ಮಾಡಿದ ಅಸಾಹುತಗಳ
ನೆನೆಯಿರಿ
ನೀವು ಎಸಗಿದ ಕ್ರೂರಕೃತ್ಯಗಳಿಗೆ ಉಚಿತ
ಶಿಕ್ಷೆಯಂ ಪಡೆಯುವಿರಿ.
ಇಂತು ಶಬ್ದವೇಧಿ,
ಆತನ ಅನುಚರರು

ಇದನ್ನು ಓದಿ ಸೋಮಶರ್ಮ "ಅಯ್ಯೋ ಇದೇನು. ಎಂತಹ ಮಾತು. ನಾನು ಅಭಯವರ್ಮನ ಕತ್ತು ಕೊಯ್ದೆನಂತೆ. ಇದಕ್ಕಿಂತಲೂ ಸುಳ್ಳು ಬೇರೆ ಇರುವುದೇ?...." ಎಂದು ಇನ್ನೂ ಏನೋ ಹೇಳಲು ಪ್ರಾರಂಭಿಸಿದ.

ಆಗ ರಾಮಸಿಂಗ್ ಆತನ ಹತ್ತಿರ ಹೋಗಿ ಆತನ ಕಿವಿಯಲ್ಲಿ ಏನೋ ಹೇಳಿದ. ಕೂಡಲೇ ಸೋಮಶರ್ಮನ ಬಾಯಿ ಮುಚ್ಚಿತು. ಆತ ವಿಜಯವರ್ಮನ ಕಡೆ ಬೆದರಿದ ದೃಷ್ಟಿಯಿಂದ ನೋಡಿದ. ಇದರ ಕಾರಣ ವಿಜಯವರ್ಮ ಗ್ರಹಿಸದಿರಲಿಲ್ಲ. ಆತನ ತಂದೆಯ ಹೆಸರೇ ಅಭಯವರ್ಮ. ಯಥಾರ್ಥವೇನೋ ಯಾರಿಗೂ ತಿಳಿಯದು. ಆದರೆ ಆತನ ತಂದೆ ಬಹಳ ವರ್ಷಗಳ ಹಿಂದೆ ಗಿರಿಕೋಟೆಯಲ್ಲಿ ಹತ್ಯೆ ಮಾಡಲ್ಪಟ್ಟನು.

ಆಗ ಆ ಹತ್ಯೆ ಕುರಿತು ತುಂಬಾ ಗಲಭೆ ಆಯಿತು. ವಿಚಾರಣೆ ಸಹ ನಡೆಯಿತು. ಆದರೆ ದಿನಗಳು ತೀರ ಕೆಟ್ಟವಾಗಿದ್ದುದರಿಂದ, ಅಪರಾಧ ಹೇಗೆ ನಡೆಯಿತೋ ನಿರ್ಧಾರ ಮಾಡಲಾಗಲೀ, ದೋಷಿಯನ್ನು ಹಿಡಿದು ಶಿಕ್ಷೆಮಾಡಲಾಗಲೀ ಸಾಧ್ಯವಾಗಲಿಲ್ಲ.

ತರುವಾಯ ಸೋಮಶರ್ಮ ರಾಮಸಿಂಗನೊಂದಿಗೆ ಆಲೋಚಿಸಿ ನಡೆದ ವಿಷಯವನ್ನೆಲ್ಲಾ ಸವಿಸ್ತಾರವಾಗಿ ಒಂದು ಕಾಗದದಲ್ಲಿ ಬರೆದು ವಿಜಯವರ್ಮನ ಕೈಗೆ ಕೊಟ್ಟನು.

ಹೊಸದಾಗಿ ಶೇಖರಿಸಿದ ಸೈನಿಕರನ್ನು ಸಂಗಡ ಕರೆದುಕೊಂಡು ವಿಜಯವರ್ಮನಿಗೆ ಭೀಮವರ್ಮನ ಹತ್ತಿರ ಹೋಗುವಂತೆ ಆಜ್ಞಾಪಿಸಿದನು. ಎಲ್ಲವನ್ನೂ ಹೇಳಿಯಾದಮೇಲೆ ವಿಜಯವರ್ಮ ಕಾಗದವನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು, ರಾಮನಗರಾಭಿಮುಖನಾಗಿ ತನ್ನ ದಳದೊಂದಿಗೆ ಹೊರಟ. (ಸಶೇಷ)






# ವ್ಯತ್ಯಾಸವೆಲ್ಲಿ?

ಕೃಷ್ಣಪ್ಪ ಒಂದು ಸಣ್ಣ ಅಕ್ಕಿ ಮಿರ್ಷಗೆ ಯಜಮಾನಿ. ಆತನ ಮಿಲ್ಲು ಕೃಷ್ಣಾನದಿ ದಡದಲ್ಲಿದೆ. ಮಿಲ್ಲು ಚಿಕ್ಕದೇ ಆದರೂ ಕೃಷ್ಣಪ್ಪ ನ್ಯಾಯವಂತನೆಂದು ಹೆಸರು ಗಳಿಸಿದ್ದುದರಿಂದ ಸಣ್ಣ ಪುಟ್ಟ ಗಿರಾಕಿಗಳೂ, ವ್ಯಾಪಾರಿಗಳೂ ಆತನ ಹತ್ತಿರವೇ ಹೋಗುತ್ತಿದ್ದರು.

ಭತ್ತ ಕುಟ್ಟಿದುದಕ್ಕೆ ಕೃಷ್ಣಪ್ಪ ಎಲ್ಲರಂತೆ ಹಣ ಪಡೆಯುವ ಬದಲು, ತಂದ ಧಾನ್ಯದಲ್ಲಿ ಹತ್ತನೇ ಒಂದು ಭಾಗ ಕೂಲಿಯಾಗಿ ಸ್ವೀಕರಿಸುವನು.

ಆತನ ಗಿರಾಕಿಗಳಲ್ಲಿ ಒಬ್ಬ ಭಾರಿ ಐಶ್ವರ್ಯವಂತ ಇದ್ದ. ಹದಿನೈದು ದಿನಕ್ಕೊಂದುಬಾರಿ ಧಾನ್ಯದ ಮೂಟೆಗಳನ್ನು ಕಳುಹಿಸುತ್ತಿದ್ದ.

ಒಂದು ದಿನ ಆ ಶ್ರೀಮಂತನಿಂದ ಕೆಲವು ಚೀಲ ಧಾನ್ಯ ಕೃಷ್ಣಪ್ಪನ ಮಿಲ್ಲಿಗೆ ಬಂತು. ಚೀಲಗಳನ್ನು ತಂದ ನೌಕರರು ಅವನ್ನು ಅಲ್ಲಿ ಹಾಕಿ ತಕ್ಷಣ ಹೊರಟುಹೋದರು. ಸಾಲಾಗಿ ಜೋಡಿಸಿದ್ದ ಆ ಚೀಲಗಳನ್ನು ನೋಡಿದ ಕೂಡಲೇ ಕೃಷ್ಣಪ್ಪನಿಗೆ ಒಂದು ಕೆಟ್ಟ ಯೋಚನೆ ಬಂತು.

'ಈಗ ಹತ್ತು ಚೀಲಗಳು ಬಂದಿವೆ. ಇದರಲ್ಲಿ ಒಂದು ಚೀಲ ಕೂಲಿಯ ಕೆಳಗೆ ನನಗೆ ಸೇರುತ್ತದೆ. ಈ ಒಂದು ಚೀಲವಷ್ಟೇ ಅಲ್ಲದೆ, ನಾನು ಮತ್ತೊಂದಿಷ್ಟು ಧಾನ್ಯ ತೆಗೆದುಕೊಂಡರೇನು? ನನ್ನ ಜೊತೆ ಮಿಲ್ಲುಗಳ ಯಜಮಾನರು ಆ ಕೆಲಸ ಮಾಡುತ್ತಿಲ್ಲವೇ?' ಎಂದುಕೊಂಡು ತನಗೆ ನ್ಯಾಯವಾಗಿ ಬರಬೇಕಾದ ಒಂದು ಚೀಲದ ಧಾನ್ಯದೊಂದಿಗೆ ಮತ್ತಷ್ಟು ತೆಗೆದು ಬೇರೆ ಒಂದು ಕಡೆ ಬಚ್ಚಿಟ್ಟ.

ಬಚ್ಚಿಟ್ಟಿದ್ದೇನೋ ಉಂಟು. ಆದರೆ ಆಗಲಿಂದ ಆತನ ಮನಸ್ಸಿನಲ್ಲಿ ಏನೋ ಒಂದು ವಿಧವಾದ ಕರಕರೆ. ಅಲ್ಲೇ ಪಕ್ಕದಲ್ಲಿ ಬಡವಿಯೊಬ್ಬಳು ಬಿಟ್ಟುಹೋಗಿದ್ದ ಧಾನ್ಯದ ಚೀಲವಿತ್ತು. ಅದನ್ನು ನೋಡಿ ಕೃಷ್ಣಪ್ಪ ಹೀಗೆಂದುಕೊಂಡ: "ಹೋಗಲಿ, ಅದರಿಂದ ಹೆಚ್ಚು ಧಾನ್ಯ ತೆಗೆದುಕೊಂಡಿದ್ದೇನೋ ಉಂಟು. ಪರವಾಯಿಲ್ಲ. ಈ ಬಡವಳ ಚೀಲದಿಂದ

ಯು. ರಾಧಾಕೃಷ್ಣ, ಅಜ್ಜಂಪುರ



ನನ್ನ ಪಾಲಿಗೆ ಬರಬೇಕಾದ ಧಾನ್ಯಕ್ಕಿಂತಲೂ ತುಸ ಕಡಿಮೆ ತೆಗೆದುಕೊಳ್ಳುತ್ತೇನೆ. ಆ ಪಾಪಕ್ಕೆ ಈ ಪುಣ್ಯ ಸರಿಹೋಗುತ್ತೆ" ಈ ರೀತಿ ಸಮಾಧಾನ ಮಾಡಿಕೊಂಡ ಕೃಷ್ಣಪ್ಪ. ಮತ್ತೆ ಹದಿನೈದು ದಿನಗಳಿಗೆ ಶ್ರೀಮಂತನ ಧಾನ್ಯದ ಚೀಲಗಳು ಯಥಾಪ್ರಕಾರ ಬಂದವು. ಹಿಂದಿನಂತೆಯೇ ಈಸಾರಿಯೂ ಸಹ ಹತ್ತನೇ ಒಂದು ಭಾಗಕ್ಕಿಂತ ಕೊಂಚ ಹೆಚ್ಚಾಗಿ ಧಾನ್ಯವನ್ನು ತೆಗೆದುಕೊಂಡ.

ಹೀಗೆ ಕೆಲವು ತಿಂಗಳು ಕಳೆದವು. ಶ್ರೀಮಂತನ ಧಾನ್ಯದಿಂದ ಬೇರೆಯಾಗಿ ತೆಗೆದು ಬಚ್ಚಿಟ್ಟದ್ದ ಧಾನ್ಯ ಸೇರುತ್ತಿದ್ದಷ್ಟು, ಕೃಷ್ಣಪ್ಪನ ಮನಶ್ಯಾಂತಿ ಕಡಿಮೆಯಾಗುತಿತ್ತು. ಆ ಶ್ರೀಮಂತನ ಹತ್ತಿರ ಹೋಗಿ ತಪ್ಪು ಒಪ್ಪಿಕೊಂಡು ಕ್ಷಮಾಪಣೆ ಕೇಳೋಣವೇ ಎಂದುಕೊಳ್ಳುವನು. ಹೀಗೇ ಇರಲು ಕೃಷ್ಣಪ್ಪನಿಗೆ ಮಿಂಚಿನಂತೆ ಒಂದುಯೋಚನೆ ಹೊಳೆಯಿತು. "ಇದುವರೆವಿಗೆ ಶ್ರೀಮಂತನಿಗೆ ನನ್ನಮೇಲೆ ಅನುಮಾನ ಬರಲಿಲ್ಲ. ಎಂದಿನಂತೆ ಆತ ಹದಿನೈದು ದಿನಗಳಿಗೊಂದಾವರ್ತಿ ಧಾನ್ಯ ಕಳುಹಿಸುತ್ತಿರುವುದೇ ಸಾಕ್ಷಿ. ಆದುದರಿಂದ ಹಿಂದೆ ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಒಂದು ಉಪಾಯ ಮಾಡುವೆನು. ನನಗೆ ನ್ಯಾಯವಾಗಿ ಹತ್ತನೇ ಒಂದುಪಾಲು ಕೂಲಿಯ ಕೆಳಗೆ ಬರಬೇಕಾದ ಧಾನ್ಯಕ್ಕಿಂತಲೂ ಒಂದೊಂದುಸಾರಿ ಕಡಿಮೆ ತೆಗೆದುಕೊಳ್ಳುವೆನು. ಹಾಗಾದರೆ ಸಿಕ್ಕಿಬೀಳುವ ಪ್ರಮೇಯವೇ ಇಲ್ಲ" ಎಂದುಕೊಂಡ.

ಹಾಗೆಂದು ನಿರ್ಧರಿಸಿ, ಪ್ರತಿಸಾರಿ ತನ್ನ ಕೂಲಿಕಡಿಮೆ ತೆಗೆದುಕೊಳ್ಳಲು ಪ್ರಾರಂಭಿಸಿದ. ಈ ವಿಧವಾಗಿ ಶ್ರೀಮಂತನ ಮುಂದೆ ಹೋಗಿ ಸಮಜಾಯಿಸಿ ಕೊಡುವ ಅವಶ್ಯಕತೆಯಿಲ್ಲದೆ ತಾನು ಅಪಹರಿಸಿದ ಧಾನ್ಯವನ್ನು ಹಿಂತಿರುಗಿಸಿ ಬಿಡಬಹುದೆಂದು ಎಣಿಸಿದ.

ಶ್ರೀಮಂತನ ಹೆಂಡತಿ ಪ್ರತಿಬಾರಿ ಧಾನ್ಯವನ್ನು ಅಳೆದುಕಳುಹುತ್ತಿದ್ದಳು. ಮಿಲ್ಲಿನಿಂದ ಬಂದ ಅಕ್ಕಿಯನ್ನೂ ಅಳೆಯಿಸಿ ನೋಡುವಳು. ಹೆಚ್ಚು ಕಡಿಮೆ ಬರುತ್ತಿರುವುದನ್ನೂ ನೋಡಿ ಒಂದುದಿನ ಗಂಡನಿಗೆ ತಿಳಿಸಿದಳಾಕೆ. ಆದರೆ ಆತ ನಂಬಲಿಲ್ಲ. ಏಕೆಂದರೆ ಕೃಷ್ಣಪ್ಪನ

ತಂದೆಯ ಕಾಲದಿಂದಲೂ ಆ ಮಿಲ್ಲೆಂದರೆ ಆತನಿಗೆ ಅಪಾರ ನಂಬಿಕೆ. ಆದುದರಿಂದ ಆತನಿಗೆ ಅನುಮಾನವುಂಟಾಗಲಿಲ್ಲ. ಆದರೂ ಮೇಲಿಂದ ಮೇಲೆ ಪದೇಪದೇ ಹೇಳುತ್ತಿದ್ದಳಾಕೆ. ಒಂದು ದಿನ ಅಕ್ಕಿಕಡಿಮೆ ಬರುವಬದಲು ಹೆಚ್ಚಾಗಿ ಬಂತೆಂದು ಆಕೆ ಹೇಳಲು ಆತ ನಗುತ್ತಾ "ನಾನು ಹೇಳಲಿಲ್ಲವೇ—ಆತ ಒಳ್ಳೆಯವನೆಂದು—ನಂಬಿಗಸ್ಥನೆಂದು" ಎಂದ.

ಇಷ್ಟರಲ್ಲಿ ಕೃಷ್ಣಪ್ಪ ತನ ಯುಕ್ತಿ ಫಲಿಸಿತಲ್ಲಾ ಎಂಬ ತೃಪ್ತಿಯಿಂದ ಒಂದು ದಿನ ತನ್ನ ಪಾಲಿಗೆ ಬರಬೇಕಾಗಿದ್ದ ಕೂಲಿಯನ್ನು ತೆಗೆದುಕೊಳ್ಳುವುದನ್ನು ಬಿಟ್ಟುಬಿಟ್ಟ.



ಅಂದು ಶ್ರೀಮಂತನ ಹೆಂಡತಿ ಅಕ್ಕಿ ಹೆಚ್ಚಾಗಿ ಬಂದಿತೆಂದು ಗಂಡನಿಗೆ ಹೇಳಿದಳು. ಮಾರನೆಯದಿನ ಬೆಳಿಗ್ಗೆ ಶ್ರೀಮಂತ ಗಾಡಿಯಲ್ಲಿ ಕೃಷ್ಣಪ್ಪನ ಮಿಲ್ಲಿಗೆ ಹೋದ. ಆತನನ್ನು ಕಂಡ ಕೂಡಲೇ ಕೃಷ್ಣಪ್ಪ ನಿಶ್ಚೇಷ್ಟಿತನಾದ.

"ಕೃಷ್ಣಪ್ಪಾ, ನಾವು ಕಳುಹಿಸುವ ಧಾನ್ಯವನ್ನು ಮೊದಲು ಅಳೆದು ನೋಡುವುದಿಲ್ಲವೆ?" ಎಂದ ಮೆಲ್ಲನೆ.

ಕೃಷ್ಣಪ್ಪ "ನೋಡುತ್ತೇನೆ, ಸ್ವಾಮಿ" ಎಂದ ಮೆಲ್ಲನೆ.

"ನಮಗೆ ಅಕ್ಕಿ ಹೆಚ್ಚಾಗಿವೆಯಲ್ಲಾ ಏಕೆ? ಹೀಗೇ ಆದರೆ ನಿನಗೆ ನಷ್ಟವಾಗುವುದಿಲ್ಲವೇ?" ಎಂದ. ಕೃಷ್ಣಪ್ಪನ ಮುಖ ಬಿಳಿಚಿಕೊಂಡಿತು. "ನಿಮ್ಮಪ್ಪನ ಕಾಲದಲ್ಲಿ ಎಂದೂ ಈ ರೀತಿ ಹೆಚ್ಚುಕಡಿಮೆ ಬರಲಿಲ್ಲವಲ್ಲ ಕೃಷ್ಣಪ್ಪಾ" ಎಂದ ಆ ಶ್ರೀಮಂತ.

ಕೃಷ್ಣಪ್ಪ ಆತನ ಪಾದಗಳಮೇಲೆ ಬಿದ್ದ. ಕಣ್ಣಿಂದ ನೀರು ಜೊಳಜೊಳನೆ ಸುರಿಯಿತು. ತಾನು ಮಾಡಿದ ಮೋಸವನ್ನೆಲ್ಲಾ ಆತನಿಗೆ ತಿಳಿಸಿದ. ಕ್ಷಮಾಪಣೆ ಕೋರಿದ. "ಇದನ್ನು ದಯವಿಟ್ಟು ಬಯಲು ಮಾಡಬೇಡಿ" ಎಂದು ಬೇಡಿಕೊಂಡ.

ಶ್ರೀಮಂತನ ಹೃದಯ ಕರಗಿತು. ಕೃಷ್ಣಪ್ಪನಿಗೆ ಅಭಯವಿತ್ತ. ಮನೆಗೆ ಹೋಗಿ ಹೆಂಡತಿಯೊಂದಿಗೆ "ಕೃಷ್ಣಪ್ಪನ ಅಳತೆ ಕಲ್ಲುಗಳನ್ನು ಸರಿ ಮಾಡಿಬಂದೆ. ಇನ್ನುಮುಂದೆ ಅಕ್ಕಿ ಸರಿಯಾಗಿ ಬರುತ್ತೆ ಬಿಡು" ಎಂದ. ಆಕೆ ಮತ್ತೆ ಗಂಡನೊಂದಿಗೆ ದೂರು ಹೇಳಿದ್ದೇ ಇಲ್ಲ.

# ಸುಲಭವಾದ ಕಸರತ್ತು



ಮನೆಯಲ್ಲೇ ಕಸರತ್ತು ಮಾಡಲು ಅವಕಾಶವಿದೆ. ಕೆಲವೊಂದು ವಿಧವಾದ ವ್ಯಾಯಾಮಗಳಿಗೆ ಸಲಕರಣೆಗಳ ಅವಶ್ಯಕತೆಯಿರವುದಿಲ್ಲ. ಹಾಗೆ ಸಲಕರಣೆಗಳ ಅಗತ್ಯವಿಲ್ಲದ ಒಂದು ಕಸರತ್ತು ಕುರಿತು ಇಲ್ಲಿ ಹೇಳುವೆನು. ಈ ವ್ಯಾಯಾಮ ಶರೀರಕ್ಕೆ ಬಲವನ್ನು ಕೊಡುವುದು ಮಾತ್ರವೇ ಅಲ್ಲದೆ ನಿನ್ನ ಸ್ನೇಹಿತರಿಗೆ ವಿನೋದವನ್ನುಂಟು ಮಾಡುವುದು. ಇಂತಹ ಆನಂದಕರವಾದ ವ್ಯಾಯಾಮವನ್ನು ನೀನೂ ಮಾಡಬಹುದು, ಮಾಡಿ ನೋಡುವಂತೆ ನಿನ್ನ ಸ್ನೇಹಿತರನ್ನು ಪ್ರೋತ್ಸಾಹಗೊಳಿಸಬಹುದು.

ಸುಮಾರು ಒಂದೂವರೆ ಅಡಿಯಿರುವ ತುಸ ದಪ್ಪನೆಯ ಕೋಲನ್ನು (ಚಿತ್ರದಲ್ಲಿ ತೋರಿಸಿರುವಂತೆ) ಕೈಯಲ್ಲಿ ಹಿಡಿದುಕೋ. ಇದೊಂದು ಸಾಮಾನ್ಯ ಕೋಲಾಗಲೀ, ರೂಲು ದೊಣ್ಣೆಯಾಗಲೀ ಆಗಿರಬಹುದು.

ನಿನ್ನ ಎರಡು ಕೈಗಳನ್ನೂ ಜೋಡಿಸಿ, ಕೈಗಳೆರಡನ್ನು ಅಗಲವಾಗಿ ಚಾಚಿ ಪಟದಲ್ಲಿ ತೋರಿಸಿರುವಂತೆ ಕೋಲನ್ನು ಹಿಡಿ. ಈಗ ಎರಡು ಕಾಲು ಜೋಡಿಸಿಕೊಂಡು ಆ ಕೋಲಿನಮೇಲೆ ಹಾರಬೇಕು. ಮೊದಲನೇ ಬಾರಿ ಹಾರುವುದು ಕಷ್ಟಕರವೇ ಹೌದು. ಆದುದರಿಂದ ಮೊದಲು ಹುಲ್ಲುಗಾವಲಿನಲ್ಲಿಯಾಗಲೀ, ಮೆತ್ತನೆಯ ತಿವಾಸಿಯ ಮೇಲಾಗಲೀ ಅಭ್ಯಾಸ ಮಾಡಿದರೆ ಏಟು ಬೀಳುವ ಸಂಭವವಿರುವುದಿಲ್ಲ.



2. ಇನ್ನೊಂದು ವ್ಯಾಯಾಮವನ್ನು ಹೇಳುವೆನು. ಅದೇ ಕೋಲನ್ನು ಈಗ ಬೆನ್ನಿನ ಹಿಂದೆ ಇಟ್ಟುಕೊ. ಎರಡು ಕೈಗಳನ್ನೂ ಕೊಕ್ಕಿಯಾಗಿಟ್ಟು, ಕೋಲು ಕೈಗಳಿಗೂ ಬೆನ್ನಿಗೂ ಮಧ್ಯೆ ಇರುಕಿಕೊಂಡಿರುವಂತೆ ಮಾಡು (ಪಕ್ಕದಲ್ಲಿರುವ ಚಿತ್ರ ನೋಡು) ಈಗ ಕಾಲುಗಳನ್ನು ಅಗಲವಾಗಿ ಚಾಚಿ ನಿಂತು ನಡೆಯಲು ಪ್ರಯತ್ನಿಸು. ಈ ವ್ಯಾಯಾಮದಿಂದ ನಿನಗೆ ನೆಟ್ಟಗೆ, ಶೀವಿಯಾಗಿ ನಡೆಯಲು ಅಭ್ಯಾಸವಾಗುತ್ತದೆ. ಬಾಗಿ ಮುದುಕರಂತೆ ನಡೆಯುವ ಅಭ್ಯಾಸವಿದ್ದರೆ ಅದು ಕೂಡಲೇ ಮಾಯವಾಗುವುದು.




ಒಂದು ತೋಟ. ಅದರ ಯಜಮಾನ ಒಬ್ಬ ದೈತ್ಯ. ಅದರಲ್ಲಿ ದಿನಾ ಬಾಲಕರು ಆಡಿಕೊಳ್ಳುವರು. ಆ ತೋಟ ಫಲವೃಕ್ಷಗಳೊಂದಿಗೆ ಹೂವಿನ ಬಳ್ಳಿಗಳೊಂದಿಗೆ ನೋಡಲು ರಮ್ಯವಾಗಿತ್ತು. ಮರಗಳ ಮೇಲಿರುವ ಪಕ್ಷಿಗಳು ಮಧುರಗಾನ ಮಾಡುವುವು. ನೆಲದ ಮೇಲೆ ಹುಲ್ಲು ದಟ್ಟವಾಗಿ ಬೆಳೆದು, ಮೆತ್ತನೆಯ ತಿವಾಸಿ ಹಾಸಿದಂತೆಯಿತ್ತು. ಆ ತೋಟದಲ್ಲಿ ಆಡಿಕೊಳ್ಳುತ್ತಿದ್ದ ಮಕ್ಕಳು ತುಂಬಾ ಉಲ್ಲಾಸವಾಗಿರುತ್ತಿದ್ದರು.

ಒಂದು ದಿನ ದೈತ್ಯ ಹಿಂತಿರುಗಿ ಬಂದ. ದೂರದೇಶದಲ್ಲಿದ್ದ ಒಬ್ಬ ಸ್ನೇಹಿತನ ಮನೆಯಲ್ಲಿ ಏಳು ವರ್ಷಗಳಿದ್ದು ಆತ ಅಂದೇ ಬಂದಿದ್ದ. ಮಕ್ಕಳು ತೋಟದಲ್ಲಿ ಆಡಿಕೊಳ್ಳುವುದನ್ನು ನೋಡಿದ. ಅವನಿಗೆ ಕೋಪಬಂತು. "ನೀವು ಏನು ಮಾಡುತ್ತಿದ್ದೀರಿ ಇಲ್ಲಿ?" ಎಂದು ಗದರಿಸಿದ. ಮಕ್ಕಳು ಭಯದಿಂದ ಪರಾರಿಯಾದರು.

ಇತರರು ತನ್ನ ತೋಟಕ್ಕೆ ಕಾಲಿಡದಂತೆ ಒಂದು ಉಪಾಯ ಮಾಡಿದ. ತೋಟದ ಸುತ್ತ ಎತ್ತರವಾದ ಗೋಡೆ ಹಾಕಿಸಿದ. 'ಒಳಗೆ ಪ್ರವೇಶವಿಲ್ಲ' ಎಂದು ಒಂದು ಹಲಗೆ ತೂಗಹಾಕಿದ.

ಈಗ ಮಕ್ಕಳಿಗೆ ಆಡಿಕೊಳ್ಳಲು ಸ್ಥಳವಿಲ್ಲ. ಬೀದಿಯಲ್ಲಿ ದೂಳೂ, ಕಲ್ಲೂ, ಇರುತ್ತಿದ್ದವು. ತಾವು ಆಡಿಕೊಳ್ಳುತ್ತಿದ್ದ ತೋಟವನ್ನು ನೆನೆನೆನೆದು ಅವರು ದುಃಖಪಡುವರು.

ವಸಂತಋತು ಬಂತು. ದೇಶದಲ್ಲೆಲ್ಲಾ ವಿವಿಧ ಗಿಡಗಳಲ್ಲಿ ಹೂಬಿಟ್ಟವು. ಪಕ್ಷಿಗಳು ಕಿಲಕಿಲ ರವದಿಂದ ಮರಗಳನ್ನು ಆಶ್ರಯಿಸಿದವು. ಆದರೆ ದೈತ್ಯನ ತೋಟದಲ್ಲಿ ಮಾತ್ರ ಹಿಮಗಾಲ ಹೋಗಿರಲಿಲ್ಲ. ಬಾಲಕರು ಅಲ್ಲಿಗೆ ಬರುವುದನ್ನು ಬಿಟ್ಟುದುದರಿಂದ ಪಕ್ಷಿಗಳಿಗೆ ಹಾಡಲು ಮನವೊಪ್ಪಲಿಲ್ಲ. ಗಿಡಗಳು ಹೂಬಿಡುವುದನ್ನೇ ಮರೆತವು. ಒಂದುಸಾರಿ ಒಂದು ಹುಲ್ಲಿನ ಹೂ ಇಣಿಕಿ ನೋಡಿತು. ಆದರೆ 'ಒಳಗೆ ಪ್ರವೇಶವಿಲ್ಲ' ಎಂಬ ಹಲಗೆ ನೋಡಿದ ಕೂಡಲೇ ಅದು ಮುದುಡಿಕೊಂಡಿತು.

ಹಿಮಕ್ಕೂ, ಚಳಿಗೂ ತುಂಬಾ ಆನಂದವಾಗಿದೆ. ಅವುಗಳನ್ನು ಓಡಿಸುವ ವಸಂತ

ಐ. ಮಹಮ್ಮದ, ಬೊಂಬಾಯಿ




ಋತು ಈ ತೋಟದಲ್ಲಿ ಪ್ರವೇಶಿಸಿಲ್ಲ. ಎಷ್ಟು ದಿನವಾದರೂ ಇಲ್ಲೇ ಹಾಯಾಗಿರುವ ಅವಕಾಶ ಅವಕ್ಕೆ ಸಿಕ್ಕಿತು. ನೆಲವೆಲ್ಲಾ ಮಂಜಿನಿಂದ ಹರಡಿತ್ತು.

ಮರಗಳಮೇಲೆ ಮಂಜು ತುಂಬಿತ್ತು. ಉತ್ತರದಿಕ್ಕಿನ ಗಾಳಿಯನ್ನು ಆಹ್ವಾನಿಸಿತು. ಮಂಚು ಪ್ರತಿದಿನ ಗಾಳಿ ವಿಪರೀತವಾಗಿ ಬೀಸುತ್ತಿದ್ದುದರಿಂದ ದೈತ್ಯನ ಮನೆಯಚಾವಡಿಗೆ ತುಂಬಾ ನಷ್ಟವಾಯಿತು. ಮನೆಯಲ್ಲಿದ್ದ ಗಾಜಿನ, ಪಿಂಗಾಣಿ ಸಾಮಾನುಗಳು ಬಹಳ ಒಡೆದುಹೋದವು.

"ಈಸಾರಿ ವಸಂತಋತು ಬರಲು ಏಕೆ ತಡವಾಯಿತು" ಎಂದು ಆಶ್ಚರ್ಯಹೊಂದಿದ ದೈತ್ಯ. ಒಂದುದಿನ ದೈತ್ಯ ಬೆಳಗ್ಗೆ ಏಳುವ



ವೇಳೆಗೆ ಮಧುರವಾದ ಗಾನ ಕೇಳಿಸಿತು. ಚಿಮ್ಮನೆ ಸುವಾಸನೆ ಬೀಸಿತು. ಕೊನೆಗೆ ವಸಂತ ಬಂತೇ ಎಂದು ದೈತ್ಯ ಕಿಟಕಿಯಲ್ಲಿ ಇಣಿಕಿ ನೋಡಿದ.

ತಾನು ಕಟ್ಟಿದ ಗೋಡೆಯ ಒಂದುಮೂಲೆಯಲ್ಲಿ ಕನ್ನಕೊರೆದು ಹುಡುಗರು ತನ್ನ ತೋಟದೊಳಕ್ಕೆ ಪ್ರವೇಶಿಸಿದ್ದಾರೆ. ಪ್ರತಿಮರದಮೇಲೂ ಒಬ್ಬೊಬ್ಬ ಬಾಲಕ ಕುಳಿತಿದ್ದಾನೆ. ಪ್ರತಿಗಿಡವೂ ಹೂವಿನೊಂದಿಗೆ ಕೂಡಿ ತುಬಾ ಚೇತೋಹಾರಿಯಾಗಿದೆ. ಹಚ್ಚನೆಯ ನೆಲದಮೇಲೆ ಸಣ್ಣಸಣ್ಣ ಬಿಳಿ ಹೂಗಳು ನಗುತ್ತಿವೆ. ಪಕ್ಷಿಗಳು ಮಧುರಗಾನ ಹಾಡುತ್ತಿವೆ. ಆ ದೃಶ್ಯ ಕಣ್ಣಿಗೆ ಹಬ್ಬವನ್ನುಂಟುಮಾಡುತಿತ್ತು.

ಆದರೆ ಒಂದುಕಡೆಮಾತ್ರ ಒಬ್ಬ ಬಾಲಕ ಖಿನ್ನನಾಗಿ ನಿಂತಿದ್ದಾನೆ. ತೀರ ಎಳೆಯವನಾದುದರಿಂದ ಮರಹತ್ತಲು ಆಗಲಿಲ್ಲ. ಆದರೂ ಆ ಹುಡುಗ ಹತ್ತಲು ಅನುಕೂಲವಾಗುವಂತೆ ಆ ಮರವೇ ತುಸಬಾಗಿತು. ಆದರೂ ಪ್ರಯೋಜನವಾಗಲಿಲ್ಲ. ಮರದ ತುಂಬಾ ಹಿಮ ಕೂಡಿದೆ.

ಈ ದೃಶ್ಯ ನೋಡಿ ದೈತ್ಯನ ಹೃದಯ ಕರಗಿತು. "ಇಷ್ಟುದಿನ ನಾನೆಷ್ಟು ಸ್ವಾರ್ಥಪರನಾಗಿದ್ದೆ. ಅದರಿಂದಲೇ ವಸಂತಋತು ಈ ತೋಟದೊಳಕ್ಕೆ ಕಾಲಿಡಲಿಲ್ಲ" ಎಂದು ನಾಚಿಕೊಂಡ.



ಮೂಲೆಯಲ್ಲಿದ್ದ ಆ ಮರದ ಬಳಿಗೆ ಚಕ ಚಕನೆ ನಡೆದ. ದೈತ್ಯನು ತಮ್ಮ ಕಡೆ ಬರುವುದನ್ನು ಕಂಡು ಬಾಲಕರು ಭಯದಿಂದ ಓಡಿದರು. ಕಿಲಕಿಲನೆಂದು ನೆಗೆದಾಡುತ್ತಿದ್ದ ಆ ಮಕ್ಕಳು ತನ್ನನ್ನು ಕಂಡು ಓಡುತ್ತಿರುವುದು ದೈತ್ಯನಿಗೆ ತುಂಬಾ ವ್ಯಸನವನ್ನುಂಟುಮಾಡಿತು. ಮಕ್ಕಳು ಹೊರಟುಹೋದರೆ ಮತ್ತೆ ತನ್ನ ತೋಟದಲ್ಲಿ ಹಿಮಗಾಲ ಕಾಲಿಡುವುದು.

ಮೂಲೆಯಲ್ಲಿದ್ದ ಆ ಚಿಕ ಹುಡುಗನ ಕಣ್ಣಿಂದ ನೀರು ಸುರಿಯುತ್ತಿದೆ. ಅವನಿಗೆ ದೈತ್ಯ ತಮ್ಮ ಕಡೆ ಬರುತ್ತಿರುವುದು ಕಾಣಿಸಲೇ ಇಲ್ಲ. ಅದರಿಂದಲೇ ಅವನು ಓಡಿಹೋಗಲಿಲ್ಲ. ದೈತ್ಯನು ಮೆಲ್ಲನೆ ಆ ಬಾಲಕನನ್ನು ಎತ್ತಿ ಆ ಮರದಮೇಲೆ ಕೂರಿಸಿದ. ಆಕೂಡಲೇ ಆ ಮರದಲ್ಲಿ ಹೂ ಬಿಟ್ಟಿತು. ಪಕ್ಷಿಗಳು ಮರದ ಮೇಲೆ ಬಂದುವಾಲಿ ಹಾಡಲು ಪ್ರಾರಂಭಿಸಿತು. ಆ ಬಾಲಕನು ಸಂತೋಷದಿಂದ ದೈತ್ಯನ ಕೊರಳನ್ನು ಬಳಸಿ, ಆತನನ್ನು ಮುದ್ದಿಟ್ಟುಕೊಂಡ.

ಮಿಕ್ಕ ಹುಡುಗರು ಈ ದೃಶ್ಯ ನೋಡಿ, ದೈತ್ಯನು ಒಳ್ಳೆಯವನೆಂದು ಗ್ರಹಿಸಿ, ತೋಟದೊಳಕ್ಕೆ ಬಂದು, ಆಡಲು ಪ್ರಾರಂಭಿಸಿದರು.

"ಈ ತೋಟ ನಿಮ್ಮದು" ಎಂದ ದೈತ್ಯ. ಸುತ್ತಿ ಕಟ್ಟಿದ್ದ ಗೋಡೆಯನ್ನು ಉರುಳಿಸಿದ. ಅಂದಿನಿಂದ ದಿನಾ ಆ ಚಿನ್ನಾರಿ ಮಕ್ಕಳೊಂದಿಗೆ ಆತನು ಆಡಿಕೊಳ್ಳುವನು. ಸಾಯಂಕಾಲ ಮನೆಗೆ ಹಿಂತಿರುಗುವ ಮುನ್ನ ಮಕ್ಕಳು




ದೈತ್ಯನ ಹತ್ತಿರ ಹೋಗುವುದು ವಾಡಿಕೆ ಆಯಿತು.

"ಅಂದು ನಾನು ಮರದಮೇಲೆ ಕೂರಿಸಿದ ಬಾಲಕನು ಎಲ್ಲಿ?" ಎಂದು ಒಂದು ದಿನ ದೈತ್ಯ ಅವರನ್ನು ಕೇಳಿದ.

"ನಮಗೆ ಗೊತ್ತಿಲ್ಲ. ಅದಕ್ಕೆ ಮೊದಲು ನಾವು ಅವನನ್ನು ಕಂಡೇ ಯಿರಲಿಲ್ಲ" ಎಂದರು.

ಮಕ್ಕಳೆಂದರೆ ದೈತ್ಯನಿಗೆ ಎಷ್ಟೋ ಸಂತೊಷವಾದರೂ ಅಂದಿನ ಬಾಲಕ ಕಾಣಿಸದೇ ಇರಲು ದೈತ್ಯನಿಗೆ ಒಂದು ರೀತಿ ಸಂಕಟವಾಯಿತು.

ವರ್ಷಗಳು ಗತಿಸಿದವು. ದೈತ್ಯನಿಗೆ ಮುದಿತನ ಬಂತು. ಹಿಂದಿನಂತೆ ಮಕ್ಕಳೊಂದಿಗೆ ಕಲೆತು ಆಡುವ ಶಕ್ತಿ ಯಿಲ್ಲ. ಅದರಿಂದ

ಒಂದೆಡೆ ಕುಳಿತು ಅವರ ಆಟಪಾಠಗಳನ್ನು ನೋಡುತ್ತಿದ್ದ. ತೋಟದ ತುಂಬಾ ಎಷ್ಟು ವಿಧವಾದ ಹೂಗಳಿವೆ. ಈ ಹುಡುಗರೇ ಆ ಅಂದವಾದ ಹೂಗಳು" ಎಂದುಕೊಳ್ಳುವನು.

ಒಂದು ಹಿಮಗಾಲದ ಉದಯ ದೈತ್ಯನು ನಿಧಾನವಾಗಿ ನಿದ್ದೆಯಿಂದ ಎಚ್ಚೆತ್ತ. ಈಗ ಆತನಿಗೆ ಹಿಮಗಾಲವೆಂದರೆ ಬೇಸರಿಕೆ ಯಿಲ್ಲ. ಏಕೆಂದರೆ ಈಗಲೇ ಮರಗಳು ವಿಶ್ರಾಂತಿ ಪಡೆಯುವುವು. ವಸಂತ ಬಂದಕೂಡಲೇ ಹೂಬಿಡುತ್ತವೆ.

ತೋಟದ ಒಂದು ಮೂಲೆಯಲ್ಲಿದ್ದ ಮರದ ತುಂಬಾ ಹೂಗಳಿವೆ. ಆ ಮರದ ರೆಂಬೆಗಳೆಲ್ಲಾ ಬಂಗಾರದ ಬಣ್ಣವನ್ನು ತಾಳಿವೆ. ಅದರ ಹಣ್ಣುಗಳು ಬೆಳ್ಳಿಯ ಬಣ್ಣದಿಂದ ಕೂಡಿವೆ. ಆ ಮರದ ಕೆಳಗೆ ಅಂದು ಕಾಣಿಸಿದ ಬಾಲಕ ನಿಂತಿದ್ದಾನೆ.

ತುಂಬಾ ಸಂತೋಷವಾಯಿತು ದೈತ್ಯನಿಗೆ. ಓಡಿದ ಮರದ ಕಡೆ. ಹುಡುಗನನ್ನು ಸಮೀಪಿಸಿದಕೂಡಲೇ ದೈತ್ಯನಿಗೆ ತುಂಬಾ ಕೋಪ ಬಂತು. ಏಕೆಂದರೆ ಆ ಹುಡುಗನ ಕೈಕಾಲುಗಳಮೇಲೆ ಮೊಳೆಗಳು ಹೊಡೆದ ಗುರತುಗಳಿವೆ. "ನಿನ್ನನ್ನು ಗಾಯಗೊಳಿಸಿದವರು ಯಾರು?" ಎಂದು ಗರ್ಜಿಸಿದ ಆತ. "ಹೇಳು, ಅವರನ್ನು ಈಗಲೇ ಅಪಚ್ಚಿಮಾಡುತ್ತೇನೆ" ಎಂದು ಗುಡುಗಿದ.

"ಈ ಗಾಯಗಳು ಪ್ರೇಮಗಾಯಗಳು" ಎಂದ ಆ ಬಾಲಕ.

ದೈತ್ಯ ಭಯಗೊಂಡ. ಆ ಮಗುವಿನ ಮುಂದೆ ಕಾಲೂರಿ "ನೀನು ಯಾರು ಮಗೂ" ಎಂದು ಕೇಳಿದ.

ಆ ಹುಡುಗ ನಗುತ್ತಾ "ಯಾರಾದರೇನು. ಈ ಒಂದುದಿನ ನಿನ್ನ ತೋಟದಲ್ಲಿ ನನ್ನನ್ನು ಆಡಿಕೊಳ್ಳಲುಬಿಡು. ತರುವಾಯ ನೀನೇ ನನ್ನ ತೋಟಕ್ಕೆ ಬರುವೆಯಂತೆ. ನನ್ನತೋಟ ಸ್ವರ್ಗದಲ್ಲಿದೆ" ಎಂದ.

ಆ ಸಾಯಂಕಾಲ ಹುಡುಗರು ತೋಟದಲ್ಲಿ ಆಡಿಕೊಳ್ಳಲು ಬರುವವೇಳೆಗೆ ದೈತ್ಯನು ಆ ಮರದಕೆಳಗೆ ಮರಣಿಸಿದ್ದಾನೆ. ಆತನ ಶರೀರ ಹೂಗಳಿಂದ ಮುಚ್ಚಿತ್ತು. ಆ ಹೂಗಳ ಪರಿಮಳ ತೋಟವನ್ನೆಲ್ಲಾ ಆವರಿಸಿತ್ತು.






ಕೌಟಿಲ್ಯ ನಗರವನ್ನು ಖಡ್ಗಸೇನನೆಂಬ ರಾಜನು ಪಾಲಿಸುತ್ತಿದ್ದನು. ಆತನೊಬ್ಬ ಮಹಾವೀರ. ಆತನ ಖಡ್ಗ ಮತ್ತು ಮಾತಿಗೆ ಈ ಲೋಕದಲ್ಲಿ ಎದುರೇ ಇಲ್ಲವಾಯಿತು.

ಒಂದುದಿನ ಖಡ್ಗಸೇನನು ಸಭೆಯಲ್ಲಿರುವಾಗ, ಅಳುತ್ತಾ ಒಬ್ಬ ಸ್ತ್ರೀ ಆತನ ಎದುರಾಗಿ ಬಂದು ನಿಂತಳು. ಖಡ್ಗಸೇನನು ಆ ಸ್ತ್ರೀಗೆ ಸಮಾಧಾನ ಹೇಳಿ, ಆಕೆಯ ದುಃಖಕ್ಕೆ ಕಾರಣವೇನೆಂದುಕೇಳಿದ.

ಅದಕ್ಕೆ ಆಕೆ "ನನ್ನ ಹೆಸರು ಚಂದ್ರಾವತಿ. ನನ್ನ ಪತಿಯನ್ನು ಕಾಲಯಕ್ಷನೆಂಬ ರಾಜನು ಅನ್ಯಾಯವಾಗಿ ಬಂಧಿಸಿ, ಸೆರೆಮನೆಯಲ್ಲಿ ಹಾಕಿದ್ದಾನೆ. ಸರ್ವಶಕ್ತಿಯುಳ್ಳ ಮಹಾಪ್ರಭುಗಳೆಂದು ನೀವು ಬಿರುದಾಂಕಿತರು. ನನ್ನ ಪತಿ ಮತ್ತೆ ನನಗೆ ಲಭ್ಯವಾಗುವಂತೆ ಮಾಡಿ ಕೊಡಬೇಕು ನೀವು" ಎಂದು ಪ್ರಾರ್ಥಿಸಿಕೊಂಡಳು.

"ಕಾಲಯಕ್ಷನೆಂಬವನು ಒಬ್ಬನಿರುವನೆಂದು ನಾನು ಕೇಳಿಯೇ ಇಲ್ಲವಲ್ಲಾ" ಎಂದ ಖಡ್ಗಸೇನ.

ಆಗ ಆ ಸ್ತ್ರೀ ವಿಲಪಿಸುತ್ತಲೇ "ಮಹಾರಾಜರೇ, ತಾವು ಕಾಲಯಕ್ಷನ ಹೆಸರನ್ನು ಕೇಳಿಲ್ಲವೆಂದರೆ ಆಶ್ಚರ್ಯವಾಗುತ್ತದೆ. ನಿಮ್ಮ ರಾಜ್ಯದ ಸರಹದ್ದಿಗೆ ಮೂರು ಯೋಜನಗಳ ಆಚೆ ಆತನೊಂದು ದೊಡ್ಡ ಕೋಟೆಯನ್ನು ಕಟ್ಟಿಕೊಂಡು ಕಣ್ಣಿಗೆ ಕಾಣಿಸಿದ ಪ್ರತಿಯೊಬ್ಬರನ್ನೂ ಬಂಧಿಸಿ, ನಾನಾ ಯಾತನೆಗಳನ್ನು ಕೊಡುತ್ತಿರುವನು" ಎಂದು ಬಿಡಿಸಿ ಹೇಳಿದಳು.

"ಸರಿ, ಅವನ ಸೊಕ್ಕು ಅಡಗಿಸುವೆನು. ನೀನು ನಿಶ್ಚಿಂತೆಯಾಗಿರು. ನಿನ್ನ ಪತಿಯನ್ನು ಕಾಪಾಡುವ ಭಾರ ನನ್ನದು." ಎಂದು ಖಡ್ಗಸೇನನು ಆಕೆಗೆ ಅಭಯವಿತ್ತನು.

ಖಡ್ಗಸೇನನು ಅಷ್ಟಕ್ಕೇ ಅಂದಿಗೆ ಸಭೆಯನ್ನು ಮುಕ್ತಾಯ ಮಾಡಿ, ಏಕಾಂಗಿಯಾಗಿ ಕಾಲಚಕ್ರನಮೇಲೆ ಯುದ್ಧ ಮಾಡಲು ಹೊರಟ.

ಅಡವಿಗಳನ್ನೂ, ನದಿಗಳನ್ನೂದಾಟಿ ಖಡ್ಗಸೇನನು ಕೆಲ ದಿನಗಳಲ್ಲಿ ಕಾಲಯಕ್ಷನ ಕೋಟೆಯ ಹತ್ತಿರ ಸಮೀಪಿಸಿದ. ಸೈನ್ಯ

ಎಂ. ರಾಮು. ಹೊಸೂರು




ವಿಲ್ಲದೆ ಸ್ವತಃ ಕಾಲಯಕ್ಷನನ್ನು ಸೋಲಿಸಬೇಕೆಂದು ಖಡ್ಗಸೇನನ ಹಠ.

ಕೋಟೆಯನ್ನು ಸಮೀಪಿಸಿದ. ದ್ವಾರಗಳು ಬಂಧಿಸಿವೆ. ದ್ವಾರವನ್ನು ಮೂರುಬಾರಿ ಗಟ್ಟಿಯಾಗಿ ಒದೆದು: "ಈ ಕೋಟೆಯ ರಾಜನ್ಯಾರೋ ಆತ ಹೊರಗೆ ಬರಲಿ. ಖಡ್ಗಸೇನನು ಮುಷ್ಟಿಯುದ್ಧಕ್ಕೆ ಕರೆಯುತ್ತಿರುವನು" ಎಂದ.

ಕೂಡಲೇ ಕೋಟೆಯ ಬಾಗಿಲು ತೆರೆದುಕೊಂಡಿತು. ವಿಕೃತಾಕಾರನೊಬ್ಬನು ಹೊಟ್ಟೆ ಹುಣ್ಣಾಗುವಂತೆ ನಗುತ್ತಾ "ಓಹೋ, ನೀನೇಯೋ ಖಡ್ಗಸೇನ. ಹಾಗಾದರೆ ನಾನೇ ಕಾಲಯಕ್ಷ. ನನ್ನೊಂದಿಗೆ ಮುಷ್ಟಿಯುದ್ಧಕ್ಕೆ ಬಂದೆಯಾ?" ಎಂದ. ಕಾಲಯಕ್ಷನ ವರ್ತನೆ, ಆತನು ತೀರಾ ತಾತ್ಸಾರವಾಗಿ ಮಾತನಾಡುವ ರೀತಿ ನೋಡಿ ಖಡ್ಗಸೇನನಿಗೆ ಕೋಪ ಬಂತು. ಒರೆಯಿಂದ ಕತ್ತಿಯನ್ನು ತೆಗೆದು ಆತನಮೇಲೆ ಏರಿಹೋದ.

ಕಾಲಯಕ್ಷ ಮತ್ತೆ ನಕ್ಕನು. "ಎಲೈ ಖಡ್ಗಸೇನನೇ, ನಿನ್ನ ಖಡ್ಗ ನಿನ್ನ ಸ್ವಾಧೀನದಲ್ಲಿರುವುದೆಂದೆಣಿಸಿದೆಯಾ? ನನ್ನ ಕೋಟೆಗೆ ಸುತ್ತಲೂ ಒಂದು ಯೋಜನೆ ದೂರದಲ್ಲಿ ನನ್ನ ಅನುಮತಿಯಿಲ್ಲದೆ ಗಾಳಿಯೂ ಸಹ ಕದಲುವುದಿಲ್ಲ. ತಿಳಿಯಿತೇ?" ಎಂದ.

ಖಡ್ಗಸೇನನು ಉರಿದುಬಿದ್ದು ಕತ್ತಿಯನ್ನು ಮೇಲಕ್ಕೆ ಎತ್ತಲು ಹೋದ. ಆದರೆ ಆತನ ಕೈ ಒಂದು ಅಂಗುಲದ ಎತ್ತರವೂ ಹೋಗಲಿಲ್ಲ. ಕತ್ತಿ ಹಾಗೇ ಕೈಯಲ್ಲಿ ನೇತಾಡುತ್ತಾ ಇತ್ತು.

"ನೀನು ಯಾಕೆ ಬಂದಿರುವೆಯೋ ನನಗೆ ತಿಳಿದಿದೆ" ಎಂದ ಕಾಲಯಕ್ಷ ನಗುತ್ತಾ. "ನಿನ್ನ ಸಹಾಯ ಬೇಡಿದ ಆ ಸ್ತ್ರೀಯ ಪತಿಯನ್ನು ಬಿಟ್ಟುಬಿಡುವೆನು. ಆದರೆ ಆತನ ಬದಲಾಗಿ ನಿನ್ನನ್ನು ಬಂಧಿಸುವೆನು, ಸರಿಯೋ?" ಎಂದ ಖಡ್ಗಸೇನನನ್ನು ಸಮೀಪಿಸುತ್ತಾ.

ಬೆರಗಾದ ಖಡ್ಗಸೇನ. ತನ್ನ ಭುಜಬಲ, ಪರಾಕ್ರಮ ಈಗ ಕೆಲಸಕ್ಕೆ ಬಾರದೆ ಹೋಯಿತಲ್ಲಾ ಎಂದು ತುಂಬಾ ವ್ಯಾಕುಲಚಿತ್ತನಾದ. ಆತನು ಹಾಗೆ ಯೋಚಿಸುತ್ತಿರುವಲ್ಲಿ ಕಾಲಯಕ್ಷ ಮತ್ತೆ ಹೀಗೆಂದ:

"ಖಡ್ಗಸೇನನೇ, ನಿನ್ನನ್ನು ಬಂಧಿಸುವುದು ನನಗೆ ಪ್ರಿಯವಾದ ಕೆಲಸವೆಂದು ಎಣಿಸಬೇಡ. ನಾನು ಕೇಳಿದ ಒಂದು ಪ್ರಶ್ನೆಗೆ ಸರಿಯಾದ

ಉತ್ತರವನ್ನು ಒಂದು ವರ್ಷದೊಳಗೆ ಹೇಳಿದೆ ಯೆಂದರೆ ನಿನ್ನನ್ನು ಬಿಟ್ಟುಬಿಡುತ್ತೇನೆ."

"ಏನು ಪ್ರಶ್ನೆ" ಎಂದು ಕೇಳಿದ ಖಡ್ಗಸೇನ ಬೇರೆ ದಾರಿಯಿಲ್ಲದೆ.

"ಪ್ರಶ್ನೆ ಅಷ್ಟೇನೂ ಮಹತ್ತರವಾದುದಲ್ಲ. ಆದರೆ ಜವಾಬೇ ಕಷ್ಟಮಯವಾದುದು. ಆದರೂ ಈ ಪ್ರಶ್ನೆಯನ್ನು ಲಾಲಿಸು. 'ಎಲ್ಲಕ್ಕಿಂತಲೂ ಸ್ತ್ರೀ ಹೆಚಾಗಿ ಕೋರುವುದು ಏನು?' ಒಂದು ವರ್ಷದಲ್ಲಿ ನೀನು ಇದನ್ನು ತಿಳಿದುಕೊಂಡು ಬಂದು ಹೇಳಬೇಕು" ಎಂದ ಕಾಲಯಕ್ಷ.

ಸರಿ ಎಂದು ಹೊರಟ ಖಡ್ಗಸೇನ. ರಾಜೋಚಿತವಾದ ತನ್ನ ಉಡುಪನ್ನು ಮೂಟೆಕಟ್ಟಿ, ಭುಜದಮೇಲೆ ಹಾಕಿಕೊಂಡು ಒಬ್ಬ ಸಾಮಾನ್ಯ ಪೌರನಂತೆ ಪಟ್ಟಣಗಳಲ್ಲಿ, ಗ್ರಾಮಗಳಲ್ಲಿ ತಿರುಗಾಡ ತೊಡಗಿದ.

ಕಾಲಯಕ್ಷನು ತನಗೆ ಹಾಕಿದ ಪ್ರಶ್ನೆಯನ್ನು ಅನೇಕಮಂದಿ ಸ್ತ್ರೀಯರಿಗೆ ಹಾಕಿದ–ಎಲ್ಲಕ್ಕಿಂತಲೂ ಸ್ತ್ರೀ ಹೆಚ್ಚಾಗಿ ಕೋರುವುದು ಏನು?–ಈ ಪ್ರಶ್ನೆಗೆ ತಲಾ ಒಂದೊಂದು ವಿಧವಾಗಿ ಉತ್ತರ ಹೇಳುತ್ತಾ ಬಂದರು.

'ಅಂದವಾದ ಗಂಡ' ಎಂದು ಕೆಲವರು, 'ಐಶ್ವರ್ಯವಂತನಾದ ಪತಿ' ಎಂದು ಕೆಲವರೂ ಹೇಳಿದರು. ಮತ್ತೆ ಕೆಲವರು 'ಬುದ್ಧಿವಂತನಾದ ಪತಿಯನ್ನು ಕೋರುವೆವು' ಎಂದರು. ಈ ವಿಧವಾಗಿ ಎಲ್ಲರೂ ಒಂದೊಂದು ರೀತಿ ಜವಾಬು ಕೊಟ್ಟರು.




ಇಷ್ಟರಲ್ಲಿ ಸಂವತ್ಸರದ ಅವಧಿ ಪೂರ್ತಿಯಾಗ ಹತ್ತಿತು. ಕಾಲಯಕ್ಷನಿಗೆ ಕೊಟ್ಟ ಮಾತಿನ ಪ್ರಕಾರ ಖಡ್ಗಸೇನನು ಮತ್ತೆ ಆತನ ಕೋಟೆಯ ಕಡೆ ಹೊರಟ. ಕೆಲದಿನ ಪ್ರಯಾಣ ಮಾಡಿ, ಒಂದು ರಾತ್ರಿ ಆ ಕೋಟೆಯ ಸಮೀಪಕ್ಕೆ ಬಂದ.

ಖಡ್ಗಸೇನನು ಆ ರಾತ್ರಿ ಕೋಟೆಯ ಪಕ್ಕದಲ್ಲಿದ್ದ ಅಡವಿಯಲ್ಲಿ ಕಾಲ ಕಳೆದು ಬೆಳಗ್ಗೆ ಕಾಲಯಕ್ಷನನ್ನು ನೋಡಬಹುದೆಂದು ಒಂದು ಮರದ ಕೆಳಗೆ ವಿಶ್ರಮಿಸಿದ.

ನಡುರಾತ್ರಿಯಲ್ಲಿ ತುಸ ದೂರದಲ್ಲಿ ಒಂದು ಸಣ್ಣ ಬೆಳಕು ಕಾಣಿಸಿತು; ಸ್ತ್ರೀ ರೋದನವೊಂದು ಕೇಳಿಸಿತು.

ಖಡ್ಗಸೇನನು ನಿದ್ರೆಯ ಮತ್ತಿನಲ್ಲೇ ಎದ್ದು, ಆ ಸ್ತ್ರೀ ಕಂಠಸ್ವರ ಕೇಳಿಬಂದ ಸ್ಥಳಕ್ಕೆ



ಹೋದ. ವಿಕೃತಾಕಾರಿಯಾದ ವೃದ್ಧ ಸ್ತ್ರೀಯೊಬ್ಬಳು ಕಾಣಿಸಿದಳು. "ಈ ನಡುರಾತ್ರಿಯಲ್ಲಿ ಏಕೆ ದುಃಖಿಸುತ್ತಿರುವೆ?" ಎಂದು ಕೇಳಿದ ಖಡ್ಗಸೇನ.

"ನನಗೀಗ ಎಂಬತ್ತು ವರ್ಷ ವಯಸ್ಸು. ನನ್ನನ್ನು ವಿವಾಹ ಮಾಡಿಕೊಳ್ಳುವವರು ಯಾರೂ ಸಿಕ್ಕದೆ ಅರುವತ್ತು ವರ್ಷಗಳಿಂದ ಹೀಗೇ ದುಃಖಿಸುತ್ತಿರುವೆನು" ಎಂದು ಹೇಳಿದಳು ಆಕೆ ಅಳುತ್ತಾ.

ಖಡ್ಗಸೇನನು ಆ ಮಾತುಗಳನ್ನು ಕೇಳಿ ತುಂಬಾ ಆಶ್ಚರ್ಯಗೊಂಡ. ಇಷ್ಟು ಕುರೂಪಿಯಾಗಿರುವ ವೃದ್ಧಳಿಗೆ ವಿವಾಹದಮೇಲೇಕಿಷ್ಟು ಅಭಿಲಾಷೆ ಎಂದು ಅಂದುಕೊಂಡ. ಆತನ ಬಾಯಿಂದ ಮಾತು ಹೊರಡುವುದೇ ಕಷ್ಟವಾಯಿತು.

ಆತನ ಆಶ್ಚರ್ಯಕ್ಕೆ ಕಾರಣ ಗ್ರಹಿಸಿದ ವೃದ್ಧಸ್ತ್ರೀ ಹೀಗೆ ಹೇಳಲು ಪ್ರಾರಂಭಿಸಿದಳು: "ಖಡ್ಗಸೇನ ಮಹಾರಾಜರೇ, ನೀವೀಗ ಪ್ರಾಣಾಪಾಯ ಸ್ಥಿತಿಯಲ್ಲಿರುವಿರಿ. ನಿಮಗೆ ಕಾಲಯಕ್ಷನು ಹಾಕಿದ ಪ್ರಶ್ನೆಗೆ ಸರಿಯಾದ ಉತ್ತರ ತಿಳಿಯದಾಗಿದೆ. ಆ ಪ್ರಶ್ನೆಗೆ ಸರಿಯಾದ ಉತ್ತರ ನನಗೊಬ್ಬಳಿಗೇ ಗೊತ್ತು" ಎಂದಳು.

"ಹಾಗಾದರೆ ಅದನ್ನು ಹೇಳಿ ಪುಣ್ಯ ಕಟ್ಟಿಕೋ. ನೀನು ಏನು ಕೇಳಿದರೂ ಕೊಡುವೆನು. ಮಾತು ತಪ್ಪುವುದಿಲ್ಲ" ಎಂದ ಖಡ್ಗಸೇನ.

"ಸರಿ, ಮಾತು ತಪ್ಪುವುದಿಲ್ಲವೆಂದು ಹೇಳಿದುದರಿಂದ ಹೇಳುತ್ತಿದ್ದೇನೆ. ಕಾಲಯಕ್ಷನ ಪ್ರಶ್ನೆಗೆ ಉತ್ತರವಿದು—ಸ್ತ್ರೀ ಎಲ್ಲಕ್ಕಿಂತಲೂ ಹೆಚ್ಚಾಗಿ ಕೋರುವುದೇನೆಂದರೆ ಯಾರೂ ತನ್ನ ಇಷ್ಟಕ್ಕೆ ಅಡ್ಡಿ ಹೇಳದಿರುವುದು" ಎಂದಳು ಆ ಸ್ತ್ರೀ.

ಖಡ್ಗಸೇನನು ಮುಂಜಾನೆ ಕಾಲಯಕ್ಷನ ಹತ್ತಿರ ಹೋಗಿ ಈ ಉತ್ತರ ಹೇಳಿದಕೂಡಲೇ ಕಾಲಯಕ್ಷನು ಆಶ್ಚರ್ಯಪಟ್ಟು, ಖಡ್ಗಸೇನನ ಬುದ್ಧಿವಂತಿಕೆಗೆ ಮೆಚ್ಚಿಕೊಂಡು, ಆತನನ್ನು ಬಂಧವಿಮುಕ್ತನನ್ನಾಗಿ ಮಾಡಿದ.

ಬದುಕಿದೆಯಾ ಬಡಜೀವವೇ ಎಂದು ಖಡ್ಗಸೇನನು ಮತ್ತೆ ವಿಕೃತಾಕಾರಳಾದ ಆ ವೃದ್ಧಸ್ತ್ರೀಯ ಹತ್ತಿರ ಬಂದು "ಅಜ್ಜೀ ನಿನಗೇನು ಬೇಕೋ ಕೇಳು" ಎಂದ.

ವೃದ್ಧಸ್ತ್ರೀ ನಕ್ಕಳು. ತನಗೆ ಬೇಕಾದು ದನ್ನು ಖಡ್ಗಸೇನು ಈಗಲೂ ಗ್ರಹಿಸದಿರಲು ಆಕೆ ತುಂಬಾ ಆಶ್ಚರ್ಯಪಟ್ಟಳು.

"ಮಹಾರಾಜರೇ, ನನಗೆ ಆಗಲೇ ಮಾತು ಕೊಟ್ಟಿರುವಿರಿ. ನನ್ನ ಕೋರಿಕೆ ತಿಳಿಸುವೆನು. ಅರವತ್ತೂ ವರ್ಷಗಳಿಂದ ನನ್ನನ್ನು ಯಾರಾದರೂ ವಿವಾಹಮಾಡಿಕೊಳ್ಳುವರೋ ಎಂದು ಎದುರುನೋಡುತ್ತಾ ಕುಳಿತಿದ್ದೇನೆ. ಇಂದಿಗೆ ನೀವು ಕಾಣಿಸಿದಿರಿ. ನನ್ನಮೇಲೆ ಕರುಣೆ ತೋರಿದಿರಿ. ನಿಮ್ಮ ಆಸ್ಥಾನದಲ್ಲಿ ಯಾರಾದರೂ ವೀರನಿಗೆ ನನ್ನನ್ನು ಕೊಟ್ಟು ವಿವಾಹ ಮಾಡಿ, ನನ್ನ ಕೋರಿಕೆಯನ್ನು ಈಡೇರಿಸಬೇಕು" ಎಂದಳು.

ಖಡ್ಗಸೇನನ ತಲೆಯಮೇಲೆ ಸಿಡಿಲು ಬಡಿದ ಹಾಗಾಯಿತು. ನೋಡುನೋಡುತ್ತಾ ಈ ವೃದ್ಧಕುರೂಪಿಯನ್ನು ತನ್ನ ಆಸ್ಥಾನದಲ್ಲಿ ಯಾವ ಯುವಕವೀರನು ತಾನೇ ವರಿಸಲು ಸಮ್ಮತಿಸುವನು? ಆದರೂ ವಾಗ್ದಾನದಂತೆ ನಡೆಯಲೇಬೇಕಷ್ಟೆ!

ಆಕೆಯನ್ನೂ ಸಂಗಡ ಕರೆದುಕೊಂಡು ಮತ್ತೆ ತನ್ನ ರಾಜ್ಯವಾದ ಕೌಟಿಲ್ಯ ನಗರಕ್ಕೆ ಬಂದ. ಬಹು ದಿನಗಳಾದಮೇಲೆ ಹಿಂತಿರುಗಿ ಬಂದ ಮಹಾರಾಜನಿಗೆ ಭಾರಿ ಸನ್ಮಾನ ನಡೆಯಿತು. ಆದರೆ ಖಡ್ಗಸೇನನಿಗೆ ಮಾತ್ರ ದಿಗಿಲು ಹಿಡಿಯಿತು.

ಆತ ಅನ್ನ ಆಹಾರಗಳನ್ನು ತೊರೆದು ದಿನ ದಿನಕ್ಕೆ ಕೃಶನಾಗುತ್ತಿದ್ದಾನೆ. ಯಾರೆಷ್ಟು ವಿಧ




ವಾಗಿ ಇದರ ಕಾರಣ ಕೇಳಿದರೂ ಹೇಳಲಿಲ್ಲ. ಕೊನೆಗೊಂದು ದಿನ ತನ್ನ ಸೋದರಳಿಯನಾದ ರೂಪಧರನಿಗೆ ಎಲ್ಲ ವಿಷಯವನ್ನೂ ತಿಳಿಸಿದ.

ಮಾವನ ಚಿಂತೆಗೆ ಕಾರಣವನರಿತಕೂಡಲೇ ರೂಪಧರನು ಆ ಕುರೂಪಿ ವೃದ್ಧಳನ್ನು ತಾನೇ ವಿವಾಹವಾಗಲು ಸಿದ್ಧನಾದ.

ರೂಪಧರನಿಗೂ ಆ ಸ್ತ್ರೀಗೂ ವಿವಾಹ ನಡೆಯಿತು. ಪ್ರಜೆಗಳು ಪರಿಪರಿ ವಿಧವಾಗಿ ಮನಸ್ಸಿನಲ್ಲಿ ಭಾವಿಸಿದರೂ, ರಾಜ ಕುಟುಂಬಕ್ಕೆ ಸಂಬಂಧಿಸಿದ ವಿಷಯವಾದುದರಿಂದ ಆ ಕುರೂಪಿಯನ್ನು ಗೌರವಿಸಲೇಬೇಕಾಯ್ತು.

ಚೆನ್ನಾಗಿ ಅಲಂಕರಿಸಿದ ಕೋಣೆಯಲ್ಲಿ ಮುದುಮುಗಳು ಇದ್ದಾಳೆ. ರೂಪಧರನು ಅಲ್ಲಿಗೆ ಹೋದ.

ಇದೇನಿದು ಆಶ್ಚರ್ಯ! ಅಲ್ಲಿ ಆತನ ಕಣ್ಣಿಗೆಬಿದ್ದ ಸ್ತ್ರೀಮೂರ್ತಿ ವೃದ್ಧಳಲ್ಲ; ಒಬ್ಬ ಸುಂದರ ಯುವತಿ. ಅಪರೂಪ ಸೌಂದರ್ಯ ರಾಶಿ. ರೂಪಧರನು ಅಚ್ಚರಿಗೊಂಡು 'ನೀನು ಯಾರು?' ಎಂದು ಪ್ರಶ್ನಿಸಿದ.

"ನಾನೇ! ರೂಪಧರನ ಪತ್ನಿ, ಸ್ವಲ್ಪ ಶಾಪ ವಿಮುಕ್ತಳಾದ ಆ ವೃದ್ಧ ಸ್ತ್ರೀ ನಾನೇ!" ಎಂದು ನಿಜ ಬಯಲು ಮಾಡಿದಳು.

ಇದಕ್ಕೆ ಆತ ಮತ್ತೂ ಅಚ್ಚರಿಗೊಂಡ. "ಸುಂದರೀ, ನಿನಗಿರುವ ಶಾಪವೇನು?" ಎಂದು ಕಾತುರದಿಂದ ಕೇಳಿದ. ಆಕೆ ಅದಕ್ಕೆ ಈರೀತಿ ಹೇಳಿದಳು:

"ರಾಜಕುಮಾರ, ಕುರೂಪಿ ಎಂದು ತುಸ ವಾದರೂ ಸಂಶಯಪಡದೆ, ಮಾವನ ಮಾತನ್ನು ಉಳಿಸಲು ನೀನು ನನ್ನನ್ನು ವಿವಾಹವಾಗಲು ಅಂಗೀಕರಿಸಿದಾಗಲೇ ಶಾಪ ಅರ್ಧ ಕಳೆಯಿತು. ಇನ್ನು ಮಿಕ್ಕ ಶಾಪ ಅಂದರೆ ಪೂರ್ತಿ ಶಾಪವಿಮುಕ್ತಳಾಗಬೇಕಾದರೆ ನಿನಗೊಂದು ಪ್ರಶ್ನೆ ನಾನು ಹಾಕುತ್ತೇನೆ. ನನ್ನ ಶಾಪ ತೊಲಗುವುದು ನೀನು ಹೇಳುವ ಉತ್ತರವನ್ನು ಅವಲಂಬಿಸಿದೆ" ಎಂದು ಹೇಳಿದಳು.

ಆ ಪ್ರಶ್ನೆಯನ್ನು ಹೇಳುವಂತೆ ರೂಪಧರ ಆಕೆಯನ್ನು ತೊಂದರೆ ಪಡಿಸಿದ. ಆಗ ಆಕೆ "ಈ ಸುಂದರ ರೂಪದಲ್ಲಿ ದಿನಾ ನಾನು ಕೆಲವು ಗಂಟೆಗಳು ಮಾತ್ರ ಕಾಣಿಸಿಕೊಳ್ಳುವೆನು. ಆದುದರಿಂದ ನೀವು ಆಲೋಚಿಸಿ ಹೇಳಬೇಕು—ನಾನು ಯಾವ ಸಮಯದಲ್ಲಿ ಈ ರೂಪವನ್ನು ಧರಿಸಬೇಕೆಂದು."

ರೂಪಧರನು ತಡಬಡಿಸದೆ "ನಿನ್ನಿಷ್ಟವೇ ನನ್ನಿಷ್ಟ" ಎಂದ.

ಈ ಉತ್ತರ ಕೇಳಿದ ಕೂಡಲೇ ಆ ಯುವತಿಯ ರೂಪದಲ್ಲಿದ್ದ ಆ ವೃದ್ಧಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕೂಡಲೇ ರೂಪಧರನನ್ನು ಸಮೀಪಿಸಿ "ನೀವು ನನಗೆ ಯಾವ ಅಡ್ಡಿಯೂ ಹೇಳದೆ ಸಮಸ್ಯೆಯನ್ನು ನನ್ನ ಇಷ್ಟಪ್ರಕಾರ ಬಿಟ್ಟುಬಿಟ್ಟರಾದುದರಿಂದ ಇಂದಿಗೆ ನನ್ನ ಶಾಪ ಪೂರ್ತಿಯಾಗಿ ನಿವೃತ್ತಿ ಆಯಿತು. ಇನ್ನುಮೇಲೆ ನಾನು ಸದಾ ಈ ರೂಪದಲ್ಲೇ ಇರಬಲ್ಲೆ" ಎಂದು ಹೇಳಿದಳು.





# ಶಿಲ್ಪಿವರ್ಯನ ಸಾವು

ಹಿಂದೆ ನಮ್ಮ ದೇಶದಲ್ಲಿ ಒಬ್ಬ ಮಹಾಶಿಲ್ಪಿಯಿದ್ದ. ಆ ಕಾಲದಲ್ಲಿ ಕರ್ಕಲ್ ಎಂಬ ಪ್ರಾಂತವನ್ನು ಪರಿಪಾಲಿಸುತ್ತಿದ್ದ ರಾಜನಿಗೆ ವಿಗ್ರಹಗಳನ್ನು ಕೆತ್ತಿಸುವುದೊಂದು ಲಹರಿ. ಆತನು ಆ ಶಿಲ್ಪಿಯನ್ನು ಬರಮಾಡಿಕೊಂಡು, ಇಪ್ಪತ್ತೈದು ಅಡಿ ಎತ್ತರದ ಪರಮೇಶ್ವನ ವಿಗ್ರಹವನ್ನು ಸಿದ್ಧಪಡಿಸುವಂತೆ ಅಪ್ಪಣೆಮಾಡಿದ.

ಅದಕ್ಕೆ ಆ ಶಿಲ್ಪಿ "ಓ, ಅದೆಷ್ಟರ ಕೆಲಸ. ಕೆತ್ತಿ ಕೊಡುವೆನು" ಎಂದು ಹೇಳಿ ಮೂರು ತಿಂಗಳಲ್ಲೆ ರಾಜನು ಕೋರಿದ ಪ್ರಕಾರ ಭಾರಿ ವಿಗ್ರಹವನ್ನು ಸಿದ್ಧಗೊಳಿಸಿದ. ವಿಗ್ರಹವನ್ನು ನೋಡಿ ರಾಜ ಆನಂದ ಪಟ್ಟ. ಅಷ್ಟು ಎತ್ತರವಾದ ವಿಗ್ರಹ ನಮ್ಮ ದೇಶದಲ್ಲಿ ಅದುವರೆವಿಗೂ ಇರಲಿಲ್ಲ. ದೇಶದೇಶಗಳಿಂದ ಬಂದವರೆಲ್ಲ ಆ ವಿಗ್ರಹವನ್ನು ನೋಡಿ ಮೆಚ್ಚಿಕೊಳ್ಳುತ್ತಿದ್ದರು. ಅದರಿಂದಾಗಿ ಆ ರಾಜನ ಕೀರ್ತಿ ದಶದಿಕ್ಕುಗಳಲ್ಲೂ ಹರಡಿತು.

ಶಿಲ್ಪಿಗೆ ಭಾರಿ ಬಹುಮಾನ ಕೊಟ್ಟು ಕಳುಹಿಸಿದ ರಾಜ. ಶಿಲ್ಪಿ ಬಹುಮಾನಗಳನ್ನು ಪಡೆದು ತನ್ನ ಸ್ವಗ್ರಾಮಕ್ಕೆ ಹೋಗುತ್ತಿರಲು ರಾಜನಿಗೆ ಭಯವಾವರಿಸಿತು.

ಅಕಸ್ಮಾತ್ ಈ ಶಿಲ್ಪಿಯನ್ನು ಬೇರೊಬ್ಬ ರಾಜನು ಯಾವಾಗವಾದರೂ ಕರೆಸಿ ಇದಕ್ಕಿಂತಲೂ ಹೆಚ್ಚು ಬಹುಮಾನ ಕೊಟ್ಟು, ಇದಕ್ಕೂ ಭವ್ಯವಾದ ವಿಗ್ರಹವನ್ನು ಕೆತ್ತಿಸಬಹುದು. ಆಗ ಆ ವಿಗ್ರಹದ ಮುಂದೆ ತಾನು ಈಗ ಕೆತ್ತಿಸಿರುವ ವಿಗ್ರಹದ ಮಹತ್ವ ಕಡಿಮೆಯಾಗಿ ತನ್ನ ಕೀರ್ತಿ ಕುಂಠಿತವಾಗಬಹುದು! ಆದುದರಿಂದ ಇನ್ನುಮುಂದೆ ವಿಗ್ರಹಗಳನ್ನು ಕೆತ್ತಲು ಸಾಧ್ಯವಾಗದಂತೆ ಆ ಶಿಲ್ಪಿಯ ಬಲಗೈಯನ್ನು ಕತ್ತರಿಸಿ ಕಳುಹಿಸಿದ ಆ ಭೂಪ!

ಶಿಲ್ಪಿ ತನ್ನ ಸ್ವಗ್ರಾಮವನ್ನು ಸೇರಿ, ತನಗೆ ರಾಜನು ಮಾಡಿದ ದ್ರೋಹವನ್ನು ನೆನೆನೆನೆದು ದುಃಖಿಸುತ್ತಾ, ಆತನಮೇಲೆ ಹೇಗೆ ಸೇಡು ತೀರಿಸಿಕೊಳ್ಳಲಿ ಎಂದು ಯೋಚಿಸುತ್ತಿದ್ದ.

ಆ ರಾಜನಿಗೆ ಕಡು ವೈರಿಯಾದ ವೇನೂರು ರಾಜನ ಹತ್ತಿರ ಹೋಗಿ ತನ್ನ ಗೋಳು ಹೇಳಿಕೊಂಡ. "ಪ್ರಭೂ ಒಂದು ಕೈ ಹೋದ

ಟಿ. ಗುರುಬಸವ, ಬೆಂಗಳೂರು



ಮಾತ್ರಕ್ಕೆ ನನ್ನ ಕೌಶಲ್ಯ ಮಣ್ಣು ಪಾಲಾಯಿತೆಂದು ಹೇಗೆ ತಿಳಿಯುತ್ತಾನೆ ಆ ರಾಜ. ಹಾಂ" ಎಂದು ಆ ಶಿಲ್ಪಿ ತನ್ನ ಎಡಗೈಯಿಂದ ಮೀಸೆ ತಿರುಗಿಸಿದ.

ಇದನ್ನು ನೋಡಿ ವೇನೂರು ರಾಜ ಆಶ್ಚರ್ಯ ಹೊಂದಿ "ಹಾಗಾದರೆ ನಿನ್ನ ಬಲಗೈಹೋದರೂ ಕೌಶಲ್ಯ ನಶಿಸಿಲ್ಲವೆಂದಾಯಿತು" ಎಂದ.

"ಎಡಗೈ ಇಲ್ಲವೇ ಮಹಾಸ್ವಾಮಿ. ಸವ್ಯಸಾಚಿ ಎರಡು ಕೈಗಳಿಂದಲೂ ಬಾಣಬಿಟ್ಟಂತೆ ನಾನೂ ವಿಗ್ರಹವನ್ನು ಕೆತ್ತಬಲ್ಲೆ" ಎಂದ.

"ಹಾಗಾದರೆ ನನಗಾಗಿ ಒಂದು ವಿಗ್ರಹ ತಯಾರಿಸು. ಕರ್ಕಲ್ ವಿಗ್ರಹಕ್ಕಿಂತಲೂ ಎತ್ತರವಾದ ವಿಗ್ರಹ ಸಿದ್ಧಪಡಿಸಬೇಕು, ಕಂಡೆಯಾ?" ಎಂದು ಪ್ರೋತ್ಸಾಹಿಸಿದ ರಾಜ.

"ಅಗತ್ಯವಾಗಿ ಮಾಡುತ್ತೇನೆ ಮಹಾಸ್ವಾಮಿ. ಮೂವತ್ತಾರು ಅಡಿ ಎತ್ತರವಿರುವ ವಿಗ್ರಹಕೆತ್ತಿಸುವೆನು" ಎಂದ.

ಶಿಲ್ಪಿ ಕರ್ಕಲ್ ರಾಜನ ಮೇಲಿದ್ದ ಜಿದ್ದಿನಿಂದ ರಾತ್ರಿ ಹಗಲು ಕೆಲಸಮಾಡಿ, ಬಹು ಬೇಗ ಆ ಮೂವತ್ತಾರು ಅಡಿ ವಿಗ್ರಹವನ್ನು ತಯಾರು ಮಾಡಿಕೊಟ್ಟ. ವೇನೂರು ರಾಜ ಪರಮಾನಂದ ಭರಿತನಾದ.

ಆದರೆ ಈ ಮೊದಲು ಕರ್ಕಲ್ ರಾಜನಿಗೆ ಉಂಟಾದ ಭಯವೇ ಈ ರಾಜನಿಗೂ ಆಯಿತು. ಶಿಲ್ಪಿಯನ್ನು ಹಾಗೇ ಬಿಟ್ಟರೆ ಇದಕ್ಕಿಂತಲೂ ಮಹತ್ತರವಾದ ವಿಗ್ರಹವನ್ನು ತಯಾರು ಮಾಡಬಹುದು. ಆಗ ತನ್ನ ವಿಗ್ರಹದ ಹಿರಿಮೆ ಏನು ಉಳಿಯುತ್ತದೆ?

ಕರ್ಕಲ್ ರಾಜನಿಗೆ ತೋರಿದ ಉಪಾಯವೇ ಈ ರಾಜನಿಗೂ ತೋರಿತು. ಆ ಶಿಲ್ಪಿ ತನ್ನ ಎಡಗೈ ಸಹಾಯದಿಂದಲೇ ತನ್ನ ಪ್ರತಿಭೆಯನ್ನು ತೋರಿಸಿದ. ಸರಿ, ಆ ಕೈಯನ್ನೂ ಕತ್ತರಿಸಿಬಿಟ್ಟರೆ ತಂಟೆ ತೀರುವುದು ಎಂದು ಯೋಚಿಸಿ, ಶಿಲ್ಪಿಯ ಎಡಗೈಯನ್ನೂ ಕತ್ತರಿಸುವಂತೆ ಆಜ್ಞಾಪಿಸಿದ.

ಆದರೇನು? ಮರ ಮುದಿಯಾದರೂ ಹುಳಿ ಹೋಗಲಿಲ್ಲವೆಂಬಂತೆ ಎರಡು ಕೈಗಳನ್ನು ನೀಗಿಕೊಂಡರೂ ಶಿಲ್ಪಿಯ ಸೇಡು ತಗ್ಗಲಿಲ್ಲ.

ಆತನು ಕೂಡಲೇ ಮೈಸೂರಿಗೆ ಓಡಿಹೋಗಿ ಶ್ರವಣಬೆಳಗೊಳದಲ್ಲಿ ರಾಜನೊಂದಿಗೆ

"ಪ್ರಭೂ, ಕೇಳಿದಿರಾ, ಆ ರಾಜರಿಬ್ಬರೂ ಮಾಡಿದ ದ್ರೋಹ" ಎಂದು ಎಲ್ಲವನ್ನೂ ಹೇಳಿಕೊಂಡ. ಹಾಗೆ ಹೇಳಿದುದರಿಂದ ಆತನ ಆವೇಶ ಕಡಿಮೆಯಾಗಲಿಲ್ಲ. ಉಗ್ರನಾದ ಶಿಲ್ಪಿ ಕೆಂಡ ಕಾರುತ್ತಾ ಹೀಗೆಂದ:

"ಪ್ರಭೂ, ಇಬ್ಬರೂ ನನ್ನ ಕೈಗಳನ್ನೇನೋ ಕತ್ತರಿಸಿದರು. ಆದರೆ ನನ್ನ ಬುದ್ಧಿಯನ್ನು ಅಪಹರಿಸಲು ಅವರ ಕೈಯಲ್ಲಿ ಸಾಧ್ಯವೆ? ಬ್ರಹ್ಮನಕೈಯಲ್ಲೂ ಸಾಧ್ಯವಿಲ್ಲ" ಎಂದ.

"ಹಾಗಾದರೆ ನೀನು ಕೈಗಳಿಲ್ಲದೆಯೇ ವಿಗ್ರಹಗಳನ್ನು ಸಿದ್ಧಗೊಳಿಸುವೆಯಾ?" ಎಂದು ಆಶ್ಚರ್ಯದಿಂದ ಕೇಳಿದ ರಾಜ.

'ಓ, ಅಗತ್ಯವಾಗಿ ನನ್ನ ಬುದ್ಧಿಶಕ್ತಿ ಉಪಯೋಗಿಸಿ, ನನ್ನ ಶಿಷ್ಯರಿಂದ ತಮಗೊಂದು ಅಪೂರ್ವವಾದ ವಿಗ್ರಹವನ್ನು ಕೆತ್ತಿಸಿ ಕೊಡುತ್ತೇನೆ' ಎಂದ ಶಿಲ್ಪಿ. "ಆಗಲಿ, ಮಾಡಿಸು ನೋಡೋಣ" ಎಂದರಾಜ.

ಶಿಲ್ಪಿ ಒಂದು ಆಸನವನ್ನು ಮಾಡಿಕೊಂಡು ಕುಳಿತುಕೊಂಡ. ಶಿಷ್ಯರಿಗೆ ಆಜ್ಞೆಗಳನ್ನು ಕೊಡುತ್ತಾ 57 ಅಡಿ ಎತ್ತರದ ಗೋಮಟೇಶ್ವರನ ವಿಗ್ರಹವನ್ನು ಸಿದ್ಧಪಡಿಸಿದ. ಆ ಶಿಲ್ಪಿಯ ನೇತೃತ್ವದಲ್ಲಿ ಕೆತ್ತಲ್ಪಟ್ಟ ಬ್ರಹ್ಮಾಂಡವಾದ ವಿಗ್ರಹವು ಅದೇ!

ಆತನು ಸಿದ್ಧಪಡಿಸಿದ ಕೊನೆಯ ವಿಗ್ರಹವೂ ಅದೇ! ಏಕೆಂದರೆ ಕರ್ಕಲ್ ರಾಜನಿಗೂ, ವೇನೂರು ರಾಜನಿಗೂ ಹುಟ್ಟಿದ ದುರ್ಬುದ್ಧಿಯೇ ಶ್ರವಣಬೆಳಗೋಳದ ರಾಜನಿಗೂ ಹುಟ್ಟಿತು. "ಅವನೆಂದರೆ ಅವನ ತಾತ" ಎಂದಂತೆ ಆತನ ಪ್ರತಿಭೆ ಮತ್ತೆ ಯಾವರಾಜನೂ ಉಪಯೋಗಿಸಲಾರದಂತೆ ಆ ರಾಜನು ಶಿಲ್ಪಿಯ ತಲೆಯನ್ನೇ ಕತ್ತರಿಸಿಹಾಕಿದ.




ಶಿಲ್ಪಿಯನ್ನು ಕೊಲ್ಲಿಸಿದ ಆ ರಾಜರು ಮೂವರೂ ಸತ್ತು ಬಹು ಕಾಲವಾಯಿತು. ಆದರೆ ಆ ಮಹಾಶಿಲ್ಪಿಯ ಕೀರ್ತಿಯನ್ನು ಸಾರುವ ವಿಗ್ರಹಗಳು ಇಂದಿಗೂ ಶಾಶ್ವತವಾಗಿ ನಿಂತಿವೆ.

ಈ ರೀತಿ ಶಿಲ್ಪಿಯ ಪ್ರತಿಭೆ ಆತನ ಜೀವನೋಪಾದಿಗೆ ಸಹಾಯವಾಗುವ ಬದಲು ಆತನ ಪ್ರಾಣವನ್ನೇ ಬಲಿಗೊಂಡಿತು.




# ದೇವದಾರು

ಮಹಾ ಪ್ರಳಯವಾದ ತರುವಾಯ ಶ್ರೀ ಮಹಾವಿಷ್ಣು ಮತ್ತೆ ಸೃಷ್ಟಿಗೆ ಕೈಹಾಕಿದ.

ಸ್ವಲ್ಪಮಟ್ಟಿಗೆ ಸೃಷ್ಟಿ ಸಾಗಿದ ತರುವಾಯ ಶ್ರೀ ಮಹಾವಿಷ್ಣುವಿಗೆ ಬಳಲಿಕೆ ಆಯಿತು. ಸ್ವಲ್ಪ ಸಮಯ ನಿದ್ದೆಮಾಡೋಣವೆಂದು ಯೋಚಿಸಿದ. ಆದರೆ ತಾನು ಎಚ್ಚರವಾಗುವ ವರೆವಿಗೆ ಯಾರು ಈ ಸೃಷ್ಟಿಯನ್ನು ಕಾಪಾಡುವರು? ಜಂತುಗಳೂ, ಮಾನವರೂ ಇನ್ನೂ ಸೃಷ್ಟಿಯಾಗಲಿಲ್ಲವಲ್ಲಾ !

ಆದುದರಿಂದ ಶ್ರೀ ಮಹಾವಿಷ್ಣು ತಾನು ಸೃಷ್ಟಿಸಿದ ಮರಗಳೆಲ್ಲವನ್ನೂ ಕರೆದು "ಎಲೇ ಮರಗಳೇ, ನಾನು ಏಳುವ ವರೆವಿಗೂ ಈ ಸೃಷ್ಟಿಯನ್ನು ಭದ್ರವಾಗಿ ನೋಡಿಕೊಳ್ಳುವ ಭಾರ ನಿಮ್ಮದು" ಎಂದು ಹೇಳಿ ಮರಗಳೆಲ್ಲವನ್ನೂ ಬೇರೆಬೇರೆಯಾಗಿ ಬೆಟ್ಟಗಳಮೇಲೆ, ಅರಣ್ಯಗಳಿಗೆ, ಮೈದಾನಗಳಿಗೆ ಕಳುಹಿಸಿಕೊಟ್ಟು ತಾನು ಮಲಗಿ ನಿದ್ರೆಹೋದ.

ಬೇವಿನಮರ, ಬಾದಾಮಿಮರ, ಆಲದಮರ ಮುಂತಾದ ಅನೇಕ ವಿಧವಾದ ಮರಗಳು ಮೈದಾನಗಳಿಗೆ ಹೋದವು. ತೇಗ, ಬಿದಿರು ಮೊದಲಾದುವು ಅರಣ್ಯಗಳಿಗೆ ಹೋದವು. ದೇವದಾರು ಎತ್ತರವಾದ ಪರ್ವತ ಶಿಖರದಮೇಲಕ್ಕೆ ಹೋಯಿತು. ಎಲ್ಲ ಮರಗಳೂ ಶ್ರೀ ವಿಷ್ಣುವಿನ ಅಪ್ಪಣೆ ಪ್ರಕಾರ ತಮ್ಮ ತಮ್ಮ ಸ್ಥಾನದಲ್ಲಿ ನಿಂತುಕೊಂಡು ಸೃಷ್ಟಿಯ ಕಾವಲು ಕಾಯುತಿತ್ತು. ಸ್ವಲ್ಪ ಕಾಲವಾ

ಕೆ. ಇಂದಿರಾ, ಹೊಸಪೇಟೆ

ದನಂತರ ಮರಗಳಲ್ಲಿ ಕೆಲವಕ್ಕೆ ಬಳಲಿಕೆ ಆಯಿತು. ಅವು ಕೊಂಬೆಗಳನ್ನು ವಾಲಿಸಿ ತೂಕಡಿಸ ಹತ್ತಿದವು. ಸ್ವಲ್ಪಕಾಲ ಸಂದಿತು.

ಮಿಕ್ಕ ಮರಗಳಿಗೂ ದಣಿವಾಯಿತು. ಅವೂ ನಿದ್ದೆಹೋದವು.

ಕಾಲಕ್ರಮೇಣ ಶ್ರೀ ಮಹಾವಿಷ್ಣು ನಿದ್ದೆಯಿಂದ ಎಚ್ಚೆತ್ತು ನೋಡಿದ. ಮರಗಳೆಲ್ಲವೂ ಗಾಢನಿದ್ರೆಯಲ್ಲಿವೆ. ಆತನಿಗೆ ಕೋಪ ಬಂತು. "ನೋಡಿದೆಯಾ ಈ ಮರಗಳ ಸೊಕ್ಕು? ನನ್ನ ಆಜ್ಞೆಯನ್ನುಲ್ಲಂಗಿಸಿ ನನ್ನೊಂದಿಗೆ ತಾವೂ ಸಹ ನಿದ್ರೆಮಾಡುವುದೇ?" ಎಂದ. "ಸ್ವಾಮಿ" ಎಂದು ಯಾರೋ ಕೂಗಿದಂತಾಯಿತು. ಶ್ರೀ ಮಹಾವಿಷ್ಣು ಅಚ್ಚರಿಗೊಂಡು ತಲೆ ಎತ್ತಿ ನೋಡಿದ. ಪರ್ವತಶಿಖರದಮೇಲೆ ನಿಂತಿದ್ದ ದೇವದಾರು ನುಡಿಯಿತು: "ಸ್ವಾಮಿ, ನಾನು ನಿದ್ದೆ ಮಾಡಲಿಲ್ಲ. ನಿಮ್ಮ ಸೃಷ್ಟಿಯನ್ನು ಸಾವಿರ ಕಣ್ಣುಗಳಿಂದ ನೋಡಿಕೊಳ್ಳುತ್ತಿರುವೆನು" ಅದನ್ನು ನೋಡಿ ಶ್ರೀ ವಿಷ್ಣುವಿಗೆ ತುಂಬಾ ಸಂತೋಷವಾಯಿತು. ಅದಕ್ಕೆ 'ದೇವದಾರು' ಎಂಬ ಹೆಸರು ಕೊಟ್ಟ. ಎಲ್ಲ ಋತುಗಳಲ್ಲೂ ಅದು ಹಸುರಾಗಿಯೇ ಇರುವಂತೆ ಅದಕ್ಕೆ ವರವನ್ನು ಅನುಗ್ರಹಿಸಿದ.



# ಇದನ್ನು ಮಾಡಬಲ್ಲೆಯಾ?



ಎರಡು ಗಾಜಿನ ಗ್ಲಾಸುಗಳು, ಸ್ವಲ್ಪನೀರು, ಒಂದು ಸಣ್ಣ ರಬ್ಬರು ಕೊಳವಿ ತೆಗೆದುಕೋ. ಮೇಜಿನಮೇಲೆ ಕೆಲವು ಪುಸ್ತಕಗಳನ್ನು ಎತ್ತರವಾಗಿ ಜೋಡಿಸಿ, ಅವುಗಳಮೇಲೆ ಒಂದು ಗ್ಲಾಸಿನಲ್ಲಿ ನೀರು ಇಡು. ಬರೀ ಗ್ಲಾಸನ್ನು ಹತ್ತಿರವೇ ಕೆಳಗಿಡು.

ರಬ್ಬರು ಕೊಳವಿಯನ್ನು ತೆಗೆದುಕೊಂಡು, ಅದರ ಒಂದು ಕೊನೆಯನ್ನು ಮೇಲಿರುವ ಗ್ಲಾಸಿನ ನೀರಿನಲ್ಲಿ ಚೆನ್ನಾಗಿ ಮುಳುಗುವಂತೆ ಹಾಕು. ಎರಡನೇ ಕೊನೆಯನ್ನು ನಿನ್ನ ಬಾಯಿಯೊಳಕ್ಕೆ ಇಟ್ಟುಕೊಂಡು, ನೀರು ಬರುವ ವರೆವಿಗೂ ಒಳಕ್ಕೆ ಉಸಿರು ಎಳೆ. ಕೊಳವಿಯ ತುಂಬಾ ನೀರು ಬಂದಕೂಡಲೇ, ನಿನ್ನ ಬಾಯಿಯಲ್ಲಿರುವ ಕೊನೆಯನ್ನು ಬೆರಳಿಂದ ಗಟ್ಟಿಯಾಗಿ ಅದುಮಿಟ್ಟು ಕೆಳಗಿರುವ ಗ್ಲಾಸಿನಲ್ಲಿ ಬಿಡು. ಮೇಲಿನ ಗ್ಲಾಸಿನಲ್ಲಿರುವ ನೀರು ಮಾತ್ರ ಕೆದಕಬೇಡ. ಮೇಲಿನ ಗ್ಲಾಸಿನಲ್ಲಿ ಇಳಿಬಿಡುವ ರಬ್ಬರು ಕೊನೆ ತುಸ ದೊಡ್ಡದಾಗಿರಬೇಕು.

ಈಗ ನೀನು ಅದುಮಿ ಹಿಡಿದಿರುವ ಕೊನೆಯನ್ನು ಮೆಲ್ಲನೆ ಬಿಟ್ಟುಬಿಡು. ಆಗ—ಮೇಲಿನ ಗ್ಲಾಸಿನಲ್ಲಿರುವ ನೀರೆಲ್ಲಾ ರಬ್ಬರು ಕೊಳವೆಯ ಮುಖಾಂತರ ಕೆಳಗಿನ ಗ್ಲಾಸಿನೊಳಕ್ಕೆ ತನ್ನಷ್ಟಕ್ಕೆ ತಾನೇ ಬರುತ್ತದೆ.

* * *

ಮೇಜಿನಮೇಲೊಂದು ಚಿಕ್ಕ ತಟ್ಟೆಯಿಡು. ತಟ್ಟೆಯ ಮಧ್ಯೆ ಒಂದು ನಾಣ್ಯವಿಡು. (2ನೇ ಚಿತ್ರ ನೋಡು) ನೋಡುವವರಿಗೆ ಈ ನಾಣ್ಯವು ಕಾಣಿಸುವುದಿಲ್ಲ. (3ನೇ ಚಿತ್ರದಲ್ಲಿರುವಂತೆ) ಈಗ ನಿನ್ನ ಸ್ನೇಹಿತನನ್ನುಕೂಗಿ ಸ್ವಲ್ಪ ಕೆಳಗೆ ಎಂದರೆ ನಾಣ್ಯ ಕಾಣಿಸದೆ ಇರುವಂತೆ ಕುಳಿತುಕೊಳ್ಳುವಂತೆ ಹೇಳು. (4ನೇ ಚಿತ್ರದಂತೆ) ಆತನು ಹಾಗೆ ಕುಳಿತಿರುವಾಗ ನೀನು ನಿಧಾನವಾಗಿತಟ್ಟೆಯಲ್ಲಿ ನೀರುಸುರಿಯಲು ಪ್ರಾರಂಭಿಸು. ತಟ್ಟೆಯಲ್ಲಿರುವ ನಾಣ್ಯ ಮೇಲಕ್ಕೆದ್ದು ಬರುವಂತೆ ಆತನಿಗೆ ಕಾಣಿಸುತ್ತದೆ. ಆದರೆ ನಿಜವಾಗಿ ನಾಣ್ಯ ಎಲ್ಲಿತ್ತೋ ಅಲ್ಲೇ ಇರುತ್ತೆ.






# ಧರ್ಮಯುದ್ಧ

ವಿಕ್ರಮದೇವನು ಅಲಕಾಪುರಿ ರಾಜ್ಯಕ್ಕೆ ರಾಜ. ಆತನ ಸೇನಾನಾಯಕರಲ್ಲಿ ಕಂಠೀರವನು ಗಟ್ಟಿಗ. ಒಂದು ವಿಜಯದಶಮಿಯ ದಿನ, ರಾಜ, ಸೇನಾನಾಯಕರು, ಮತ್ತಿತರ ಪರಿವಾರ ಎಲ್ಲಾ ಬೆಳದಿಂಗಳಲ್ಲಿ ಕುಳಿತುಕೊಂಡು ಅದೂ ಇದೂ ಮಾತನಾಡಿಕೊಳ್ಳುತ್ತಿದ್ದರು. ಆಗ ಒಬ್ಬ ವಿಚಿತ್ರವಾದ ವ್ಯಕ್ತಿ ಕುದುರೆಯಮೇಲೆ ಬಂದು ಇಳಿದ. ಆತನನ್ನು ನೋಡಿ ಪರಿವಾರದಲ್ಲಿದ್ದ ಒಬ್ಬನು "ಯಾರು ನೀನು? ಮಿತ್ರನೋ, ಶತ್ರುವೋ?" ಎಂದು ಕೇಳಿದ. ಆ ವ್ಯಕ್ತಿ "ಶತ್ರುವೂ ಅಲ್ಲ, ಮಿತ್ರನೂ ಅಲ್ಲ. ನಾನೊಬ್ಬ ಯೋಧ" ಎಂದ.

"ಹಾಗಾದರೆ ನಿನಗೇನು ಬೇಕು?" ಎಂದು ತೀವ್ರವಾಗಿ ಆತನ ಕಡೆ ನೋಡಿದ ವಿಕ್ರಮದೇವ.

"ಯೋಧನಿಗೆ ಬೇಕಾದುದಾದರೂ ಏನು? ಬಲಾಬಲಗಳನ್ನು ನೋಡುವುದುತಾನೇ?" ಎಂದು ಎದುರು ಪ್ರಶ್ನೆ ಹಾಕಿದ ಆ ವಿಚಿತ್ರ ವ್ಯಕ್ತಿ ನಗುತ್ತಾ. ಈ ಮಾತು ಕೇಳಿ ಎಲ್ಲರೂ ಆತನ ಕಡೆಗೆ ನೋಡಿದರು. ಆತ ಆಜಾನುಬಾಹು. ದಪ್ಪನೆಯ ಗಡ್ಡ. ಕೈಯಲ್ಲಿ ಥಳಥಳಿಸುವ ಗಂಡುಗೊಡಲಿ. ಆತನ ವೇಷನೋಡಿ ಎಲ್ಲರಿಗೂ ಭಯವಾಯಿತು!

"ಸರಿ, ನಿನ್ನೊಂದಿಗೆ ಯುದ್ಧ ಮಾಡಲು ನಮ್ಮ ಸೇನಾನಿ ಕಂಠೀರವ...." ಎಂದು ರಾಜನು ಮಾತು ಮುಗಿಸುವಷ್ಟರಲ್ಲಿ, ಕಂಠೀರವನು ಎದ್ದು ನಿಂತುಕೊಂಡ. ಆಗ ಯೋಧನು ನಗುತ್ತಾ "ನಾನು ಯುದ್ಧಮಾಡಲು ಬಂದಿಲ್ಲ. ಇದೋ ಈ ಗಂಡುಗೊಡಲಿ ನೋಡಿರುವಿಯಷ್ಟೆ. ನಿಮ್ಮಲ್ಲಿ ಯಾರಾದರೂ ಸರಿ, ಇದರಿಂದ ನನ್ನ ಕತ್ತಿನಮೇಲೆ ಒಂದು ಏಟು ಹಾಕಿ. ಒಂದೇ ಏಟು ಮತ್ತೆ! ನನಗೆ ಏಟನ್ನು ಕೊಟ್ಟ ಯೋಧನು ಬರುವ ವರ್ಷ ಇದೇ ಹಬ್ಬದದಿನದಂದು, ನನ್ನ ಹತ್ತಿರ ಬಂದು ಇದೇ ಗಂಡು ಗೊಡಲಿಯಿಂದ ಕತ್ತಿನಮೇಲೆ ಮರು ಏಟನ್ನು ತಿನ್ನಬೇಕು" ಎಂದ.

ಎ. ಸಂಜೀವಮುರಕಾಲ, ಸಸಿಹಿತ್ಲು



ಈ ವಿಚಿತ್ರವಾದ ಕೋರಿಕೆಯನ್ನು ಕೇಳಿ ಎಲ್ಲರೂ ಪಕಪಕನೆ ನಕ್ಕರು. ಹರಿತವಾದ ಆ ಗಂಡುಗೊಡಲಿಯಿಂದ ಕತ್ತಿನಮೇಲೆ ಏಟು ಪಡೆದು, ಇನ್ನೂ ಜೀವಿಸಿರುವುದುಂಟೇ! ಈ ಏಟಿಗೆ ಮರು ಏಟು ಮುಂದಿನ ವರ್ಷ ಹೋಗಿ ಪಡೆಯುವುದೇ !!

ಎಲ್ಲರೂ ವಿಸ್ಮಯದಿಂದ ನೋಡುತ್ತಿರುವರು. ಯೋಧನು ಸಿದ್ಧನಾಗಿದ್ದಾನೆ. ಕಂಠೀರವನು ಯೋಧನ ಕೈಯಲ್ಲಿದ್ದ ಗಂಡುಗೊಡಲಿಯನ್ನು ತೆಗೆದುಕೊಂಡು, ಎರಡು ಕೈಗಳಿಂದ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಆತನ ಕತ್ತಿನಮೇಲೆ ಒಂದು ಏಟು ಹಾಕಿದ. ಏನು ಆಶ್ಚರ್ಯ! ಗಂಡುಗೊಡಲಿ ಕೊರಳಲ್ಲಿ ಅರ್ಧ ಮಾತ್ರ ಇಳಿಯಿತು. ಆದರೆ ಒಂದು ತೊಟ್ಟು ರಕ್ತವಾದರೂ ಕೆಳಗೆ ಬೀಳಲಿಲ್ಲ! ಯೋಧನು ಹಾಗೇ ನಿಂತಿದ್ದ. ಗೊಡಲಿಯನ್ನು ಸರ್‍ರನೆ ಎಳೆದುಬಿಟ್ಟು, ಒಂದುಸಾರಿ ಕೈಯಿಂದ ಆ ಜಾಗವನ್ನು ಸವರಿಕೊಂಡ. ಅಷ್ಟೇ. ಆತನಿಗೆ ಪೆಟ್ಟುತಿಂದಂತೆಯೇ ಕಾಣಿಸಲಿಲ್ಲ. ಆತನು ನಗುತ್ತಾ ಕಂಠೀರವನಕಡೆ ನೋಡಿ "ಎಲೈ ಯೋಧನೇ, ಮಾತುತಪ್ಪದೆ ನೀನು ಬರುವ ವರ್ಷ ಇದೇದಿನ ನಾನಿರುವ ಗಿರಿದುರ್ಗಕ್ಕೆ ಬರಬೇಕು" ಎಂದು ಹೇಳಿ ಕುದುರೆ ಹತ್ತಿ ಹೊರಟುಹೋದ. ಎಲ್ಲರೂ ಬೆಕ್ಕಸಬೆರಗಾದರು.

* * *

ಒಂದುವರ್ಷ ಹೀಗೇ ಕಳೆಯಿತು. ನೋಡುತ್ತಿರುವಂತೆಯೇ ವಿಜಯದಶಮಿ ಸಮೀಪಿಸಿತು. ಮಾತು ಉಳಿಸಿಕೊಳ್ಳಬೇಕೆಂದರೆ ಕಂಠೀರವನು ಗಿರಿದುರ್ಗಕ್ಕೆ ಹೋಗಲೇಬೇಕು. ಆ ಯೋಧನಿಂದ ಏಟುಪಡೆಯಲೇಬೇಕು. ಮಾತು ಉಳಿಸಿಕೊಳ್ಳದಿದ್ದರೆ ರಾಜನಿಗೂ, ರಾಜ್ಯಕ್ಕೂ ಕಳಂಕ. ಆದುದರಿಂದ ಚೆನ್ನಾಗಿ ಯೋಚಿಸಿ ವಿಕ್ರಮದೇವನೂ, ಆತನ ಪರಿವಾರವೂ ಕಂಠೀರವನನ್ನು ಕಳುಹಿಸಿಕೊಟ್ಟರು.

ಆದರೆ ತಮ್ಮ ಕಂಠೀರವನು ಮತ್ತೆ ಬರುವನೆಂಬ ಭರವಸೆ ಯಾರಿಗೂ ಇರಲಿಲ್ಲ. ಅಂತಹ ಮನುಷ್ಯ ತಮ್ಮನ್ನು ಅಗಲುವನೆಂದು ಅವರೆಲ್ಲಾ ವ್ಯಾಕುಲಚಿತ್ತರಾದರು.




ಕಂಠೀರವನು ಸಂತೋಷದಿಂದ ಗಿರಿದುರ್ಗದಕಡೆ ರಾತ್ರಿಹಗಲು ಅರಣ್ಯಗಳಲ್ಲಿ ಪ್ರಯಾಣಮಾಡುತ್ತಾ ಹೋದ. ಬಹಳ ಆಯಾಸವಾದುದರಿಂದ ವಿಶ್ರಾಂತಿ ಪಡೆಯಲು ಒಂದು ಮರದ ಕೆಳಗೆ ಕುಳಿತ.

ಅಷ್ಟರಲ್ಲಿ ಆತನಿಗೊಂದು ಆರ್ತನಾದ ಕೇಳಿಸಿತು. ಏನೆಂದು ಹೋಗಿ ನೋಡುತ್ತಾನೆ! ಯಾರೋ ಯುವತಿ ಕಳ್ಳರ ಕೈಗೆಸಿಕ್ಕಿ ಒದ್ದಾಡುತ್ತಿದ್ದಾಳೆ. ಕಂಠೀರವನು ಖಡ್ಗವನ್ನು ಝಳಪಿಸುತ್ತಾ ಅವರ ಮೇಲೆ ನುಗ್ಗಲು, ಕಳ್ಳರು ಪಲಾಯನಸೂತ್ರವನ್ನು ಕೈಗೊಂಡರು.

ಆ ಯುವತಿಯ ಬಂಧನಗಳನ್ನು ಬಿಚ್ಚಿ ಕುಶಲ ಪ್ರಶ್ನೆಗಳನ್ನು ಹಾಕಿದ. ಆಕೆ ರಾಜಕುಮಾರಿ. ಇಂತಹ ಆಪತ್ತಿನಿಂದ ತನ್ನನ್ನು ಕಾಪಾಡಿದುದರಿಂದ ಆ ರಾಜಕುಮಾರಿ ಒಂದು ಮಹಿಮಾವಿಶೇಷವುಳ್ಳ ಉಂಗರವನ್ನು ಆತನಿಗೆ ಬಹುಮಾನವಾಗಿ ಕೊಡುತ್ತಾ "ಇದು ಹತ್ತಿರವಿದ್ದರೆ ಎಂತಹ ಆಯುಧವಾದರೂ ಹಾನಿ ಮಾಡಲಾರದು" ಎಂದಳು.

ಕಂಠೀರವನು ಉಂಗುರವನ್ನು ತೆಗೆದುಕೊಳ್ಳಲಿಲ್ಲ. "ಅಂದು ನಾನು ಆ ಯೋಧನನ್ನು ಹರಿತವಾದ ಗಂಡು ಗೊಡಲಿಯಿಂದ ಕುತ್ತಿಗೆಯಮೇಲೆ ಹೊಡೆದೆ. ಅದೇರೀತಿ ಆತನಿಂದ ಮರು ಏಟು ಪಡೆಯಬೇಕಾದುದು ನನ್ನ ಕರ್ತವ್ಯ, ಧರ್ಮ. ಈ ಮಹಿಮಾವಿಶೇಷವುಳ್ಳ ಉಂಗುರವನ್ನು ಬಚ್ಚಿಟ್ಟುಕೊಂಡು ನಾನು ಹೋಗುವುದು ಅಧರ್ಮವಾದ ಕಾರ್ಯ. ವೀರನಾದ ನಾನು ಅಂತಹ ಕೆಲಸವನ್ನು ಅಂಗೀಕರಿಸಲಾರೆ" ಎಂದು ಸಮಾಧಾನ ಹೇಳಿ ಮತ್ತೆ ಮರದ ಕೆಳಗೆ ಹೋದ.

ತುಸ ಹೊತ್ತಾದಮೇಲೆ ಹತ್ತಿರವೇ ಇದ್ದ ನದಿಗೆ ಸ್ನಾನಮಾಡಲು ಹೋದ ಕಂಠೀರವ. ಆಗ ರಾಜಕುಮಾರಿ ಮೆಲ್ಲನೆ ಆ ಮರದ ಹತ್ತಿರಕ್ಕೆ ಹೋದಳು. ಆತನು ಹಿಂದಿರುಗುವಷ್ಟರಲ್ಲಿ ಆಕೆ ಅದೃಶ್ಯಳಾದಳು.

ಕಂಠೀರವನು ಗಿರಿದುರ್ಗ ಸೇರುವ ವೇಳೆಗೆ ಆ ಯೋಧನು ಗಂಡುಗೊಡಲಿಯೊಂದಿಗೆ

ಸಿದ್ಧನಾಗಿ ನಿಂತಿದ್ದಾನೆ. "ಮಾತು ತಪ್ಪದ ನಿನನ್ನು ಕಂಡು ತುಂಬಾ ಸಂತೋಷವಾಗಿದೆ" ಎಂದು ಕಂಠೀರವನನ್ನು ಮೆಚ್ಚಿದ.

ಕಂಠೀರವನು ಸಿದ್ಧನಾಗಿ ನಿಂತು "ಮಿತ್ರನೇ, ಮರು ಏಟು ತೆಗೆದುಕೋ" ಎಂದು ಧೈರ್ಯದಿಂದ ನುಡಿದ. "ಆದರೆ ಒಂದೇ ಏಟು, ಜೋಕೆ" ಎಂದು ಎಚ್ಚರಿಕೆ ಕೊಟ್ಟ!

ಈ ಎಚ್ಚರಿಕೆ ಕೇಳಿ ಆ ಯೋಧ ನಸುನಕ್ಕ! ತನ್ನ ಗಂಡುಗೊಡಲಿಯಿಂದ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಒಂದೇಟು ಕೊಟ್ಟ, ಕಂಠೀರವನ ಕುತ್ತಿಗೆಯ ಮೇಲೆ.

ಆಶ್ಚರ್ಯವಾಶ್ಚರ್ಯ! ಕೊಡಲಿ ಕುತ್ತಿಗೆಯ ಅರ್ಧಕ್ಕೆಮಾತ್ರ ಇಳಿಯಿತು. ಒಂದು ಬೊಟ್ಟು ರಕ್ತವಾದರೂ ಬೀಳಲಿಲ್ಲ. ಯೋಧನಂತೆಯೇ ಕಂಠೀರವನಿಗೂ ಅಪರಿಮಿತವಾದ ಆಶ್ಚರ್ಯವಾಯಿತು. ಕಂಠೀರವನು ಆ ಗಂಡುಗೊಡಲಿಯನ್ನೂ ಹೊರಗೆಳೆದು, ಒಂದುಸಾರಿ ಏಟುಬಿದ್ದಾ ಸ್ಥಳವನ್ನು ತಡವಿಕೊಂಡ. ಅಷ್ಟೇ.

ಯೋಧ ನಿರ್ಘಾಂತನಾದ. ಕೋಪತಡೆಯಲಾರದೆ "ಮೋಸ, ಮೋಸ" ಎಂದು ಗಂಡು ಗೊಡಲಿಯನ್ನು ಮತ್ತೆ ಮೇಲೆತ್ತಿದ. ಕಂಠೀರವನು ಕುಪಿತನಾಗಿ ಖಡ್ಗವನ್ನು ಹೊರತೆಗೆದ.

ಅಷ್ಟರಲ್ಲಿ ಗಿರಿದುರ್ಗದ ಮಹಾರಾಜನೂ, ರಾಜಪುತ್ರಿಯೂ ಅಲ್ಲಿಗೆ ಬಂದು ಅವರನ್ನು ತಡೆದರು. ತನಗೆ ಉಪಕಾರಮಾಡಿದ ಕಂಠೀರವನಿಗೆ ಆತನಿಗೆ ತಿಳಿಯದಂತೆ ಆತನ ಕವಚದಲ್ಲಿ ಮಹಿಮಾವಿಶೇಷವುಳ್ಳ ಉಂಗುರವನ್ನು ತಾನು ಬಚ್ಚಿಟ್ಟವಿಷಯವನ್ನು ರಾಜಪುತ್ರಿ ತನ್ನ ತಂದೆಗೆ ಹೇಳಿದಳು.

ನಿಜವರಿತಕೂಡಲೇ ಅವರವರ ಧರ್ಮವನ್ನು ಅವರವರು ನೆರೆವೇರಿಸಿದರೆಂದು ಕಂಠೀರವನನ್ನೂ ರಾಜಕುಮಾರಿಯನ್ನೂ, ಮೆಚ್ಚಿಕೊಂಡ ಯೋಧ. ತರುವಾಯ ಕಂಠೀರವನ ಧರ್ಮಬುದ್ಧಿಗೆ, ಧೈರ್ಯಕ್ಕೆ ಸಂತೋಷಗೊಂಡು, ರಾಜನು ಆತನಿಗೆ ತನ್ನ ಮಗಳನ್ನು ಕೊಟ್ಟು, ವೈಭವವಾಗಿ ವಿವಾಹಮಾಡಿದ.



# ಮರ ಮೇಲಕ್ಕೆ ಬೆಳೆಯುತ್ತದೆ—ಏಕೆ?



**ಈ** ಪ್ರಶ್ನೆಗೆ ಉತ್ತರ ತಿಳಯುವ ಮೊದಲು ನಾವೊಂದು ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಭೂಮಿಯಮೇಲೆ ಕಾಣಿಸುವುದನ್ನು ಕಂಡು, ಮರ ಭೂಮಿಯ ಮೇಲಕ್ಕೆ ಮಾತ್ರ ಬೆಳೆಯುವುದು ಎಂದು ತಿಳಿಯುತ್ತೇವೆ. ನಿಜ ನುಡಿಯಬೇಕೆಂದರೆ ಮರ ಮೇಲಕ್ಕೆ ಮಾತ್ರ ಬೆಳೆಯವುದಿಲ್ಲ. ಸ್ವಲ್ಪಭಾಗ ನೆಲದ ಕೆಳಗೂ ಬೆಳೆಯುತ್ತದೆ. ಅದನ್ನೇ ಬೇರು ಎಂದು ಕರೆಯುವರು. ಮರದ ಪ್ರತಿ ಭಾಗವೂ ತನ್ನ ಕೆಲಸವಿರುವೆಡೆಗೇ ಬೆಳೆಯುವುದು. ಹೀಗೆ ನಡೆಯಲು ಕೆಲ ಕಾರಣಗಳಿವೆ.



ಬೀಜಗಳಲ್ಲಿ ಕೆಲವು ಅಣುಗಳಿರುತ್ತವೆ. ಅದು ಗಾಳಿ, ಬೆಳಕುಗಳಲ್ಲಿ ಬೆಳೆಯುವ ಭಾಗಗಳಾಗಿ ಸಿದ್ಧವಾಗಿರುತ್ತವೆ. ಬೆಳಕು ಕಾಣಿಸುವ ಕಡೆಗೇ ಅವು ಬೆಳೆಯುತ್ತದೆ.

ಅದೇರೀತಿ ಬೀಜಗಳಲ್ಲಿ ಮತ್ತೆ ಕೆಲವು ಅಣುಗಳಿರುತ್ತವೆ. ಅವು ಕತ್ತಲೆಯಲ್ಲಿ ಚೆನ್ನಾಗಿ ಬೆಳೆಯುವುದು. ಅದು ನೆಲದ ಆಕರ್ಷಣ ಶಕ್ತಿಗೆ ಸಹ ಕಟ್ಟುಬಿದ್ದಿರುತ್ತವೆ. ಆದುದರಿಂದ ಆ ಅಣುಗಳು ನೆಲದ ಒಳಗೇ ಚೆನ್ನಾಗಿ ಬೆಳೆಯುವುವು.

ಈ ಬೀಜಗಳಲ್ಲಿ ಕೆಲವು ತಮಾಷೆಗಳನ್ನು ಮಾಡಬಹುದು. ಅವುಗಳನ್ನು ತಲೆಕೆಳಕಾಗಿ ನಾಟೋಣ. ಆದರೂ ಅದು ಸಸಿಯಾಗಿ ಬೆಳೆಯುವಾಗ ಸುತ್ತ ತಿರುಗಿ ಬೆಳೆಯುತ್ತದೆ. ಹೇಗೆಂದರೆ ಬೆಳಕು ಗಾಳಿ ಇರುವ ಕಡೆ ಅಂದರೆ ನೆಲದಮೇಲಕ್ಕೆ ರೆಂಬೆಗಳೂ, ಕತ್ತಲಿರುವ ಕಡೆ ಅಂದರೆ ನೆಲದಡಿಯಲ್ಲಿ ಬೇರೂ ಬೆಳೆಯುವುದು.

ಇದರಿಂದ ನಾವು ತಿಳಿಯಬೇಕಾದುದಿಷ್ಟೆ: ಮರಗಳಿಗೆ ಎರಡು ಮುಖ್ಯ ಭಾಗಗಳಿವೆ. ಒಂದು, ಭೂಮಿಯಮೇಲೆ ಕಾಣಿಸುವ ರೆಂಬೆ, ಮುಂತಾದುವು; ಮತ್ತೊಂದು ಭೂಮಿಯೊಳಗೆ ಹೂತುಕೊಂಡಿರುವ ಬೇರಿನಭಾಗ. ಈ ಎರಡು ಭಾಗಗಳಲ್ಲಿ ಯಾವೊಂದು ಭಾಗವೂ ಎರಡನೇಯದರ ಸಹಾಯವಿಲ್ಲದೆ ಜೀವಿಸಲಾರದು. ಮರದ ನಿರ್ಮಾಣವೇ ಅಷ್ಟು. ಎಲೆ, ರೆಂಬೆ, ಹೂ ಬೆಳೆಯುವ ಭಾಗ ಬೆಳಕಿನಲ್ಲಿ ಬೆಳೆಯುತ್ತದೆ. ಎರಡನೇ ಭಾಗ ನೆಲದಲ್ಲಿ ಹೂತುಕೊಂಡು ನೀರು ಆವರಣಗಳನ್ನು ಹೀರುತ್ತಾ ಮರಕ್ಕೆ ಭದ್ರತೆಯನ್ನು ಕಲ್ಪಿಸುತ್ತದೆ.




ಹಿಂದೆ ಮೇವಾಡ ರಾಜ್ಯವನ್ನು ರಾಜಾಗಜ ಸಿಂಹನು ಪಾಲಿಸುತ್ತಿದ್ದನು. ಆತನ ಹಿರಿಯ ಮಗ ಅಮರಸಿಂಹ. ತಂದೆ ಮಕ್ಕಳಿಗೆ ಭಿನ್ನಾ ಭಿಪ್ರಾಯವಿದ್ದುದರಿಂದ ಅಮರಸಿಂಹನು ಸಿಂಹಾಸನವನ್ನು ಹತ್ತದಂತಿರಲು ಆತನನ್ನು ದೇಶಭ್ರಷ್ಟನನ್ನಾಗಿ ಮಾಡಿದ ಆತನ ತಂದೆ.

ಅಮರಸಿಂಹನಿಗೆ ಈ ಶಿಕ್ಷೆ ವಿಧಿಸಿದ ದಿನ ಆ ರಾಜ್ಯದ ಪ್ರಜೆಗಳೆಲ್ಲರೂ ತುಂಬಾ ದುಃಖ ಪಟ್ಟರು. ಇಷ್ಟುದಿನ ಅಮರಸಿಂಹನೊಂದಿಗಿದ್ದ ಸೈನಿಕರು ಆ ಸಮಯದಲ್ಲಿ ಆತನ ಕೈಬಿಡದೆ ಆತನ ಸಂಗಡ ಹೊರಟರು.

ಅಮರಸಿಂಹ ನೆಟ್ಟಗೆ ಹೋಗಿ ಷಹಜಹಾನ ನನ್ನು ಭೇಟಿ ಮಾಡಿದ. ಬಾದಷಹ ಷಹಜ ಹಾನನು ಅಮರಸಿಂಹನನ್ನು ಕಂಡಕೂಡಲೇ, ಆತನು ತುಂಬಾ ಪರಾಕ್ರಮಿ ಎಂದು ಗ್ರಹಿ ಸಿದ. ಆತನಿಗೆ ತನ್ನ ಆಸ್ಥಾನದಲ್ಲಿ ಒಂದು ಉನ್ನತೋದ್ಯೋಗವನ್ನು ಕಲ್ಪಿಸಿಕೊಟ್ಟ.

ಕೆಲದಿನಗಳಾದಮೇಲೆ ಬಾದಷಹನು ತನ್ನ ರಾಜಧಾನಿಯನ್ನು ಡೆಲ್ಲಿಯಿಂದ ಆಗ್ರಾನಗರಕ್ಕೆ ಬದಲಾಯಿಸಿದ. ಈ ಸಮಯದಲ್ಲಿ ಅಮರ ಸಿಂಹನಿಗೂ ಬಿಕನೀರ್ ಸಂಸ್ಥಾನದ ಅರಸ ನಿಗೂ ಮನಸ್ತಾಪವುಂಟಾಯಿತು. ಇಬ್ಬರೂ ತನ್ನ ಕೈಕೆಳಗಿನ ಉದ್ಯೋಗಿಗಳೇ ಆದುದ ರಿಂದ ಅವರ ಜಗಳವನ್ನು ಸುಲಭವಾಗಿ ಬಿಡಿಸ ಬಹುದೆಂದುಕೊಂಡಿದ್ದ ಷಹಜಹಾನ್.

ಆದರೆ ಅಮರಸಿಂಹನ ಪ್ರತಿಕೂಲವಾಗಿ ಕೆಲವು ಒಳಸಂಚುಗಳು ನಡೆದವು. ಹಗೆಗಳು ಹೆಚ್ಚಾದರು. ಬಾದಷಹನ ಭಾವಮೈದುನ ನಾದ ಸಲಬತ್‌ಖಾ ಪ್ರಬಲ ಶತ್ರುವಾದ. ಶತ್ರುಗಳು ಅನೇಕರಿದ್ದರೂ ಅಮರಸಿಂಹನ ಎದುರಿಗೆ ನಿಂತು ಕಾದಾಡಲು ಧೈರ್ಯವಿಲ್ಲ. ಆದುದರಿಂದ ಒಳಗೊಳಗೇ ಪಿತೂರಿ ಮಾ ಡುತ್ತಾ, ಅಮರಸಿಂಹನನ್ನು ಸದೆಬಡಿಯಲು ಸಮಯ ಕಾದಿದ್ದರು. ಅಮರಸಿಂಹನ ಪಕ್ಷ ಸಲಬತ್‌ಖಾನನ ಪಕ್ಷ ಎಂದು ಎರಡು ಪಕ್ಷ ಗಳಾದುವು. ಅಮರಸಿಂಹನನ್ನು ಕುರಿತು ಪ್ರತಿ ಕಕ್ಷಿಗಳು ಮೇಲಿಂದಮೇಲೆ ಚಾಡಿ ಹೇಳುತ್ತಿ ದ್ದುದರಿಂದ ಬಾದಷಹನಿಗೆ ಆತನಮೇಲೆದುರಭಿ ಪ್ರಾಯವೇರ್ಪಟ್ಟಿತ್ತು. ಅಮರಸಿಂಹನು ಏನು ಹೇಳಿದರೂ ಬಾದಷಹನು ಕೇಳಲಿಲ್ಲ. ಅಮರ

ವಿ. ಆರ್. ರಾಜ, ಮಲ್ಪೆ

ಸಿಂಹನು ತಪ್ಪಿತಸ್ಥನೆಂದು ತೀರ್ಮಾನಿಸಿ, ಜುಲ್ಮಾನೆ ವಿಧಿಸಿದ. ಇಷ್ಟೇ ಅಲ್ಲದೆ ಅಪರಾಧ ರುಸುಮನ್ನು ವಸೂಲು ಮಾಡಲು ತನ್ನ ಭಾವ ಮೈದುನನಾದ ಸಲಬತ್ ಖಾನನನ್ನು ನೇಮಿಸಿದ. ಸಲಬತ್ ಖಾನನು ದುರಹಂಕಾರಿ. ತನ್ನ ಅಭೀಷ್ಟ ನೆರವೇರಿದುದರಿಂದ ಆನಂದದಿಂದ ಮೈಮರೆತು ಒಂದು ದಿನ ತುಂಬಿದ ಸಭೆಯಲ್ಲಿ "ಅಮರಸಿಂಹ, ಏನು, ಹಣ ಕೊಡುವಿಯಾ ಇಲ್ಲವೇ?" ಎಂದು ಅಮರಸಿಂಹನನ್ನು ಕುರಿತು ಕೇಳಿದ.

ಪೌರುಷವಂತನಾದ ಅಮರಸಿಂಹನಿಗೆ ಈ ಮಾತುಗಳು ತೀಕ್ಷ್ಣವಾದ ಅಂಬಿನಿಂದ ಹೊಡೆದಂತಾಯಿತು. "ಇರು. ಈಗಲೇ, ಇಲ್ಲೇ ತೀರಿಸುವೆನು" ಎಂದು ಒರೆಯಿಂದ ಕತ್ತಿಯನ್ನು ತೆಗೆದು, ಸಲಬತ್ ಖಾನನ ತಲೆ ಕತ್ತರಿಸಿ ಹಾಕಿದ. ದರ್ಬಾರೆಲ್ಲ ನಿಶ್ಶಬ್ದವಾಯಿತು. ಬಾದಷಹನು ಅಮರಸಿಂಹನನ್ನು ನಿಂದಿಸಿದ. ಬಾದಷಹನನ್ನೂ ಸಹ ಲೆಕ್ಕ ಮಾಡದೆ, ಮಾತಿಗೆ ಮಾತು ಉತ್ತರಕೊಟ್ಟ ಅಮರಸಿಂಹ.

ಅಷ್ಟರಲ್ಲೇ ಕತ್ತಿಗಳನ್ನು ಹಿಡಿದು ಸಿದ್ಧರಾಗಿದ್ದ ಅಮರಸಿಂಹನ ಸೈನಿಕರು ಖಾನನ ಗುಂಪಿನಮೇಲೆ ಬಿದ್ದರು. ಭೀಕರ ಕದನವಾಯಿತು. ಸ್ವಲ್ಪ ಹೊತ್ತಿನಲ್ಲೇ ರಕ್ತದ ಕಾಲುವೆಗಳು ಪ್ರವಹಿಸಿದವು.

ಬಾದಷಹನು ರೊಚ್ಚಿಗೆದ್ದು "ಅಮರಸಿಂಹನನ್ನು ಹಿಡಿಯಿರಿ" ಎಂದು ಆಜ್ಞಾಪಿಸಿದ.




ಆಗ ಅಮರಸಿಂಹನು ಸಿಂಹದ ಮರಿಯಂತೆ ರಂಗದ ಮಧ್ಯೆ ಬಂದ. ಶತ್ರುಗಳು ಆತನನ್ನು ಸುತ್ತುಗಟ್ಟಿದರು. ಎಲ್ಲರ ನಡುವೆ ಆತನ ಖಡ್ಗ ಮಿಂಚಿನಂತೆ ಪ್ರಕಾಶಿಸುತಿತ್ತು. ಅವರೆಲ್ಲರ ತಲೆಗಳನ್ನು ಚೆಂಡಾಡಿದ. ಅವರ ತಲೆಗಳು ರಾಶಿರಾಶಿಯಾಗಿ ಕೆಳಗೆ ಬಿದ್ದುವು ಬಾದಷಹನ ತಲೆಯನ್ನು ಸಹ ಕಡಿಯಲ ಹವಣಿಸಿದ.

ಆದರೆ ಈ ಸೂಕ್ಷ್ಮವನ್ನು ಅರಿತ ಬಾದಷಹನು ಅಂತಃಪುರಕ್ಕೆ ಓಡಿದ. ಆಗ್ರಾದ ಕೆಂಪುಕೋಟೆ ರಕ್ತಮಯವಾಗಿತ್ತು. ಕೋಟೆಯೊಳಗಿದ್ದ ಜನ ಗಡಗಡನೆ ನಡುಗುತ್ತಿದ್ದರು. ಅಮರಸಿಂಹನನ್ನು ಕಣ್ಣೆತ್ತಿ ಸಹ ನೋಡಲು ಹಿಂಜರಿಯುತ್ತಿದ್ದರು. ಶತ್ರುಗಳನ್ನು ಬಲಿ




ಹಾಕಿದ ಅಮರಸಿಂಹ ಯೋಚನಾಮಗ್ನನಾಗಿ ತಾನೊಬ್ಬನೇ ಹೋಗುತ್ತಿದ್ದನು.

ಮಾರನೆಯ ದಿನ ಬಾಹಷಹನು ಒಂದು ಚಿನ್ನದ ಹರಿವಾಣವನ್ನು ದರ್ಬಾರಿನಲ್ಲಿರಿಸಿ ಅಮರಸಿಂಹನ ತಲೆ ಕತ್ತರಿಸಿ ತಂದವರಿಗೆ ಇದನ್ನು ಬಹುಮಾನವಾಗಿ ಕೊಡುವೆವು ಎಂದು ಪ್ರಕಟಿಸಿದ. ಇದನ್ನು ಕೇಳಿದ್ದೆಷ್ಟೋ ಅಷ್ಟೇ ಯಾರೂ ಈ ಸಾಹಸಕ್ಕೆ ಕೈಹಾಕಲು ಮುಂದೆ ಬರಲಿಲ್ಲ. ಆದರೆ ಅಮರಸಿಂಹನ ಭಾವಮೈದುನ ಅರ್ಜುನಗೌಡ್ ಮುಂದೆ ಬಂದ. "ತೊಂದರೆ ಪಡಬೇಡ" ಎಂದು ಬಾದಷಹನು ಎಚ್ಚರಿಕೆ ಕೊಟ್ಟ. "ಇಲ್ಲ, ನಾನು ಎಲ್ಲಾ ಆಲೋಚಿಸಿಯೇ ಆತನ ತಲೆ ತರಲು ಸಿದ್ಧನಾಗಿದ್ದೇನೆ" ಎಂದ ಅರ್ಜುನಗೌಡ್.



ಇದುವರೆಗೂ ಇವರಿಬ್ಬರಲ್ಲಿ ಏನೋ ವೈಮನಸ್ಸು ಉಂಟಾಗಿತ್ತು. ಆದರೂ ಈಗ ಗೌಡ್ ಕಿರುನಗೆಯ ಸೋಗು ಹಾಕಿಕೊಂಡು ಅಮರಸಿಂಹನ ಹತ್ತಿರಹೋಗಿ, ಬಾದಷಹನೊಂದಿಗೆ ರಾಜೀ ಮಾಡಿಕೊಳ್ಳುವಂತೆ ಹಿತೋಪದೇಶ ಮಾಡಿದ. ಈ ಮಾತುಗಳನ್ನು ಕೇಳಿ ಅಮರಸಿಂಹ ಕ್ಷುಬ್ಧನಾದ. ಆದರೇನು, ಹಾಗೂಹೀಗೂ ಉಭಯರೂ ಬಾದಷಹನ ದರ್ಶನ ಮಾಡಲು ಆತನನ್ನು ಒಪ್ಪಿಸಿದ ದುರ್ಮೂರ್ತಿ ಗೌಡ್.

ಇಬ್ಬರೂ ಒಂದು ಚಿಕ್ಕ ದ್ವಾರದಿಂದ ಹೋಗಲು ನಿಶ್ಚಯಿಸಿದರು. ಅಲ್ಲಿಗೆ ಹೋಗಿ ನೋಡಲು ಆ ದ್ವಾರ ಅತಿ ಚಿಕ್ಕದಿತ್ತು. ತಲೆ ತಗುಲುವಂತೆ ಕಾಣಿಸಿತು. ತಲೆತಗ್ಗಿಸಲು ಅಭಿಮಾನಿ ಅಮರಸಿಂಹ ಒಪ್ಪಲಿಲ್ಲ. ಆಗ ಗೌಡ್ ಪಕ್ಕದಲ್ಲಿದ್ದ ಒಂದು ಕಿಟಕಿಯನ್ನು ತೋರಿಸಿ ಅದರಲ್ಲಿ ಕಾಲು ತೂರಿಸಿ ಇಳಿಯುವಂತೆ ಅಮರಸಿಂಹನಿಗೆ ಹೇಳಿದ. ನಿಷ್ಕಪಟಿ ಅಮರಸಿಂಹ ತುಸವಾದರೂ ಯೋಚಿಸದೆ ತನ್ನ ಭಾವಮೈದುನ ಹೇಳಿದಂತೆ ಮಾಡಿದ. ಅಮರಸಿಂಹ ಕಾಲುಗಳನ್ನು ಕಿಟಕಿಯಲ್ಲಿ ಬಿಟ್ಟಕೂಡಲೇ ತನ್ನ ಬಾಕುವಿನಿಂದ ಆತನ ಎದೆಯನ್ನು ತಿವಿದ ಧೂರ್ತ ಗೌಡ್. ಅಮರಸಿಂಹ ಸಹಾಯಹೀನನಾದ. ಆದರೂ ಅತಿ ಪ್ರಯಾಸದಿಂದ ದ್ರೋಹಿಯ ಮೂಗನ್ನು ಕತ್ತರಿಸಿ ಪ್ರಾಣವನ್ನು ಬಿಟ್ಟನು.

ಕೂಡಲೇ ಗೌಡ್ ತನ್ನ ಭಾವನ ತಲೆಯನ್ನು ಕತ್ತರಿಸಿ ಹೆಮ್ಮೆಯಿಂದ ಬಾದಷಹ



ನಿಗೆ ಕಾಣಿಕೆಯಾಗಿ ತೆಗೆದುಕೊಂಡು ಹೋದ. ಆದರೆ ಬಾದಷಹನು ಗೌಡನ ವಂಚನೆಯನ್ನು ಕೇಳಿ, ಪುರಸ್ಕಾರ ಮಾಡುವ ಬದಲು, "ಇವನ ಮುಖಕ್ಕೆ ಮಸಿ ಬಳಿದು, ಕತ್ತೆಯಮೇಲೆ ಕೂರಿಸಿ ಮೆರವಣಿಗೆ ಮಾಡಿ, ತಲೆ ಕಡಿಯಿರಿ" ಎಂದು ತನ್ನ ಭಟರಿಗೆ ಆಜ್ಞಾಪಿಸಿದ.

ಅಮರಸಿಂಹನ ಮರಣವಾರ್ತೆ ಆತನ ಹೆಂಡತಿ ಹರಿರಾಣಿಯ ಕಿವಿಗೆಬಿತ್ತು. ಆಕೆ ಪತಿಯೊಂದಿಗೆ ಸಹಗಮನವಾಚರಿಸಲು ನಿರ್ಧರಿಸಿದಳು. ಆದರೆ ಪತಿಯ ಕಳೇಬರ ಕೋಟೆಯಲ್ಲಿ ಸೇರಿಬಿಟ್ಟಿದೆ. ಏನು ಮಾಡಬೇಕೀಗ?

ಆಗ ಅಮರಸಿಂಹನ ಪೌರುಷವಂತನಾದ ಸೋದರಳಿಯ ರಾಮಸಿಂಹನು "ನೂರು ಜನರನ್ನು ಕರೆದುಕೊಂಡು ಹೋಗಿ ನಾನು ಮಾವನ ಕಳೇಬರವನ್ನು ತರುತ್ತೇನೆ" ಎಂದ. 'ಪಾಪ, ಈ ಹುಡುಗನಿಂದ ಏನು ಆಗುತ್ತದೆ. ಅನ್ಯಾಯವಾಗಿ ಮೊಗಲರ ಕೈಗೆ ಸಿಕ್ಕಿ ಬಲಿಯಾಗುವನು' ಎಂದು ಬಹಳ ಹೊತ್ತು ಯೋಚಿಸಿದಳು ಹರಿರಾಣಿ.

ಬೇರೆ ಗತ್ಯಂತರವಿಲ್ಲದೆ ಆಕೆ ತನ್ನ ಮೈದುನನಾದ ಭಲ್ಲೂಸಿಂಹನಿಗೆ ಕಾಗದ ಬರೆದು ಕಳುಹಿಸಲು ನಿಶ್ಚಯಮಾಡಿಕೊಂಡಳು. ಭಲ್ಲೂಸಿಂಹನಿಗೂ ಆಕೆಯ ಪತಿಗೂ ಎಷ್ಟೋ ದಿನದಿಂದ ಮಾತುಕತೆ ನಿಂತುಹೋಗಿತ್ತು. ಆದರೆ ಆಕೆಗೆ ಈ ಸಮಯದಲ್ಲಿ ಬೇರೆ ಯಾವ ದಾರಿಯೂ ತೋರಲಿಲ್ಲ.




"ಅಪ್ಪಾ, ನಿಮ್ಮ ಅಣ್ಣಂದಿರು ತುರಕರ ಕೈಯಲ್ಲಿ ಘೋರಮರಣವನ್ನು ಹೊಂದಿ ನನ್ನನ್ನು ಬಿಟ್ಟು ತೆರಳಿದ್ದಾರೆ. ಸಹಗಮನವನ್ನಾಚರಿಸಿ, ಅವರೊಂದಿಗೆ ಸ್ವರ್ಗವನ್ನು ಸೇರುವುದೇ ನನಗೆ ಮುಕ್ತಿ. ಆದರೆ ಅವರ ಕಳೇಬರ ಕೆಂಪುಕೋಟೆಯಲ್ಲಿ ಸಿಕ್ಕಿಕೊಂಡಿದೆ. ಮಹಾವೀರರಾದಂತಹ ನಿಮ್ಮ ಅಣ್ಣಂದಿರ ಶವವನ್ನು ಹೇಗಾದರೂ ತೆಗೆದುಕೊಂಡು ಬಾ. ಕುಟುಂಬ ಗೌರವವನ್ನು ನಿಲ್ಲಿಸು. ರಾಜಪುತ್ರ ಪೌರುಷ ತೋರಿಸಬೇಕಾದ ಸಮಯ ಬಂದಿದೆ. ನಡೆ ಹೊರಡು." ಎಂದು ಭಲ್ಲೂಸಿಂಹನಿಗೆ ಕಾಗದ ಬರೆದು ಕಳುಹಿಸಿದಳು. ಆ ಕಾಗದವನ್ನು ಕಂಡು ಭಲ್ಲೂಸಿಂಹನ ಮನವು

ಜೋಲಾಡಿತು. ಸುಮ್ಮನಿದ್ದುಬಿಡೋಣವೆಂದು ಆತನಿಗೆ ಅನ್ನಿಸಿತು. ಆತನ ಮನಸ್ಸನ್ನು ಗ್ರಹಿಸಿದ ಆತನಪತ್ನಿ "ನೀವು ಮನೆಯಲ್ಲಿರಿ, ನಾನು ಹೋಗಿ ಶವವನ್ನು ತರುತ್ತೇನೆ" ಎಂದಳು. ಈ ಮಾತುಗಳನ್ನು ಕೇಳಿ ಭಲ್ಲೂಸಿಂಹನಿಗೆ ಉಕ್ರೋಶವುಂಟಾಯಿತು. ತತ್ ಕ್ಷಣ ಪರಿವಾರವನ್ನು ತೆಗೆದುಕೊಂಡು ಹೊರಟ. ಭಲ್ಲೂಸಿಂಹನನ್ನು ಬಾಲಕ ರಾಮಸಿಂಹನೂ ಹಿಂಬಾಲಿಸಿದ. ಭಲ್ಲೂಸಿಂಹನು ತನ್ನ ಪರಿವಾರದೊಂದಿಗೆ ಹೀಗೆಂದು ಹೇಳಿದ:

"ಮಹಾವೀರನಾದ ನನ್ನ ಸಹೋದರನ ಆತ್ಮವು ನಮ್ಮ ಕಡೆ ನೋಡುತ್ತಿದೆ. ಆತನ ವಂಶ ಗೌರವ ಉಳಿಸುವುದು, ಇಲ್ಲ ನೀರಿನಲ್ಲಿ ಮುಳುಗಿಸುವುದು ನಿಮ್ಮ ಕೈಯಲ್ಲಿದೆ."

"ಯಾವ ತ್ಯಾಗವನ್ನಾದರೂ ನಾವು ಮಾಡುವೆವು" ಎಂದು ಆತನ ಪರಿವಾರವೆಲ್ಲಾ ಪ್ರಮಾಣ ಮಾಡಿದರು. ಈ ವಿಧವಾಗಿ ಐನೂರು ಜನ ವೀರರೊಂದಿಗೆ ಭಲ್ಲೂ ಸಿಂಹ ಪ್ರಯಾಣ ಬೆಳೆಸಿ ಬಾದಷಹನ ಕೋಟೆಯೊಳಕ್ಕೆ ಹೊಕ್ಕು ಅಮರಸಿಂಹನ ಶವವಿದ್ದ ಕಡೆಗೆ ಬಂದರು.

ಶವವನ್ನು ಕಂಡಕೂಡಲೇ ಭಲ್ಲೂಸಿಂಹನ ಕಣ್ಣುಗಳಿಂದ ಧಾರಾಕಾರವಾಗಿ ಕಂಬನಿ ಮಿಡಿಯಿತು. ತಕ್ಷಣವೇ ಅದನ್ನು ಭುಜದಮೇಲೆ ಹಾಕಿಕೊಂಡು ಕುದುರೆಯನ್ನು ನಾಗಾಲೋಟದಿಂದ ಓಡಿಸಿದ.

ಅಷ್ಟರಲ್ಲಿ ಮೊಗಲರು ಎಚ್ಚರವಾದರು. ಸಂಜ್ಞೆಗಳನ್ನು ಮಾಡಿದರು. ರಾಜಪುತ್ರವೀರರನ್ನು ಸುತ್ತುಗಟ್ಟಿದರು. ಶತ್ರುಗಳು ಭಲ್ಲೂಸಿಂಹನನ್ನು ಹಿಂಬಾಲಿಸದಂತೆ ರಾಜಪುತ್ರ ವೀರರು ತಡೆದು ಭಾರೀಕದನವಾರಂಭಿಸಿದರು. ಆಗಾಗಲೇ ಭಲ್ಲೂಸಿಂಹನು ಕೋಟೆಯಿಂದ ಹೋಗಿಬಿಟ್ಟಿದ್ದನು. ಮೊಗಲರು ಸುಮ್ಮನಿರಲಿಲ್ಲ. ಶತ್ರುಗಳನ್ನು ಅಟ್ಟಿಕೊಂಡು ಹೋಗಿ, ಹರಿರಾಣಿ ಸಹಗಮನ ಮಾಡುವ ಸ್ಥಳವನ್ನು ಸೇರಿದರು. ಆದರೆ ಅವರು ಅಲ್ಲಿಗೆ ಬರುವ ವೇಳೆಗೆ ಆಕೆಯ ಸಹಗಮನ ಯಾವೊಂದೂ ಆತಂಕವಿಲ್ಲದೆ ನಡೆದು ಹೋಗಿತ್ತು.

ಈಗಲೂ ಅಮಸಿಂಹನ ಅದ್ಭುತ ಚರಿತ್ರೆಯನ್ನು ಉತ್ತರದಕಡೆ ಒಂದು ಅಮರಕಥೆಯಂತೆ ಹೇಳುವುದುಂಟು.



# ★ 9ರ ಮಹತ್ತು ★

```
                12345679
                99999999
          ----------------
               111111111
              111111111
             111111111
            111111111
           111111111
          111111111
         111111111
        111111111
       111111111
       -----------------
       12345678987654321
```

ಈ ಶೀರ್ಷಿಕೆಯ ಕೆಳಗೆ ನಾವು ಪ್ರಾರಂಭ ಮಾಡಿದ ಸರಪಣಿಯನ್ನು ಮುಂದುವರಿಸಲು ಪಾಠಕರು ಅನೇಕ ವಿಚಿತ್ರಗಳನ್ನು ಆರಿಸಿ ಕಳುಹಿಸಿರುವರೆಂದು ಹೇಳಲಿಕ್ಕೆ ನಮಗೆ ತುಂಬಾ ಸಂತೋಷವಾಗುತ್ತಿದೆ. ಪಾಠಕರು ಕಳುಹಿಸಿರುವ ಕೆಲವು ತಮಾಷೆಗಳನ್ನು ಈ ಕೆಳಗೆ ಕೊಡುತ್ತಿರುವೆವು.

(1) 9 ಒಂಭತ್ತು ಅಂಕಿಗಳಿಂದ ಒಂದು ತಮಾಷೆ ಗುಣಾಕಾರ ಹೇಳುವೆನು. ಈ ಪಕ್ಕದ ಚಿತ್ರ ನೋಡಿ, ನಿಮಗೇ ತಿಳಿಯುತ್ತದೆ ಅದರ ಗಮ್ಮತ್ತು.

ವಿ. ಹನುಮಮ್ಮ

(2) 1 ಮೊದಲುಗೊಂಡು (8ನೇ ಅಂಕಿ ಹೊರತು) ಒಂಭತ್ತಿನವರೆಗೆ ಸಾಲಾಗಿಬರೆ. ಈ ಸಂಖ್ಯೆಯನ್ನು 9 ರಿಂದಾಗಲೀ, ಒಂಭತ್ತರಿಂದ ಗುಣಿಸಲ್ಪಡುವ ಮತ್ತೆ ಇತರ ಸಂಖ್ಯೆಯಿಂದಲಾಗಲೀ ಗುಣಿಸು. ಹಾಗೆ ಗುಣಿಸಿದರೆ ಬರುವ ವಿಚಿತ್ರ ಈ ಕೆಳಗೆ ನೋಡು:—

$$12345679 \times 9 = 111,111,111$$
$$12345679 \times 18 = 222,222,222$$
$$12345679 \times 27 = 333,333,333$$

ಇದೇ ರೀತಿ 36, 45, 54, 63, 72, 81 ರಿಂದ ಗುಣಿಸಿ ನೋಡು.

ಯಂ. ವಿ. ಯಸ್. ರಾಮಲಿಂಗ

(3) ಯಾವ ಅಂಕಿಯನ್ನಾದರೂ 9ರಿಂದ ಭಾಗಿಸಿದರೆ ಬರುವ ಶೇಷವನ್ನು ತಿಳಿಯುವ ಬಗೆ: ಉದಾಹರಣೆಗಾಗಿ 33785 ಎಂಬ ಸಂಖ್ಯೆ ತೆಗೆದುಕೋ. ಆ ಅಂಕಿಗಳೆಲ್ಲವನ್ನೂ ಸೇರಿಸು ಎಂದರೆ 3+3+7+8+5=26 ಬರುತ್ತೆ. ಈ 26ನ್ನು ಮತ್ತೆ ಕೂಡು, ಅಂದರೆ 2+6=8. ಈ ವಿಧವಾಗಿ 33785ನ್ನು 9 ರಿಂದ ಭಾಗಿಸಿದರೆ ಬರುವ ಶೇಷ 8 ಎಂದು ತಟಕ್ಕನೆ ಹೇಳಿಬಿಡಬಹುದು. ಇದೇ ರೀತಿಯಾಗಿ ಎಷ್ಟೇ ದೊಡ್ಡ ಸಂಖ್ಯೆಯನ್ನು ಭಾಗಿಸಿದರೆ ಬರುವ ಶೇಷ ಹೇಳಿಬಿಡಬಹುದು.

ಪಿ. ಸಂಧ್ಯಾ

## ಉತ್ತರ ಹೇಳು

1. ಪ್ರಪಂಚದಲ್ಲೆಲ್ಲಾ ದೊಡ್ಡ ದ್ವೀಪ ಯಾವುದು?
   - ಇಂಗ್ಲೆಂಡ್
   - ಗ್ರೀನ್‌ಲೆಂಡ್
   - ಬೋರ್ನಿಯಾ
2. ಕೆಳಗಿನ ನದಿಗಳಲ್ಲಿ ಯಾವುದು ದೊಡ್ಡದು?
   - ಸಿಂಧು
   - ಬ್ರಹ್ಮಪುತ್ರ
   - ಗಂಗಾ
3. ಪ್ರಪಂಚದಲ್ಲೆಲ್ಲಾ ದೊಡ್ಡ ಗ್ರಂಥಾಲಯ ಎಲ್ಲಿದೆ?
   - ಅಮೆರಿಕಾ
   - ಬ್ರಿಟನ್
   - ರಷ್ಯಾ
4. ಮುದ್ರಣ ಯಂತ್ರವನ್ನು ಮೊದಲು ಕಂಡು ಹಿಡಿದ ದೇಶ ಯಾವುದು?
   - ಇಂಡಿಯಾ
   - ಈಜಿಪ್ಟ್
   - ಚೈನಾ
5. ಟೆಲಿಗ್ರಾಫ್ ಕಂಡುಹಿಡಿದವರು ಯಾರು?
   - ಮೋರ್ಸ್
   - ಬೆಲ್
   - ಎಡಿಸನ್
6. 'ರಗಳೆ ಕವಿ' ಎಂದು ಯಾರನ್ನು ಹಾಸ್ಯ ಮಾಡುವರು?
   - ಹರಿಹರ
   - ಭಾಸ
   - ಬಾಣಭಟ್ಟ

[ಉತ್ತರ 58ನೇ ಪೇಜಿನಲ್ಲಿ]

## ಬೆಕ್ಕುಭಾವನ ಕಾಶೀಯಾತ್ರೆ



ಪುಣ್ಯ ಸಂಪಾದಿಸಿಕೊಳ್ಳುವ ಸಲುವಾಗಿ ಬೆಕ್ಕುಭಾವ ಕಾಶೀಯಾತ್ರೆಗೆ ಹೊರಟಿತು. ದಾರಿಯಲ್ಲಿ ಒಂದು ಹಲ್ಲಿ, ಒಂದು ಅಳಿಲು ಸಿಕ್ಕಿ ತಾವೂ ಸಂಗಡ ಬರುತ್ತೇವೆ ಎಂದವು. ಬೆಕ್ಕು ಭಾವನಿಗೆ ತುಂಬಾ ಸಂತೋಷವಾಯಿತು, ದಾರಿಯುದ್ದಕ್ಕೂ ಮಾತನಾಡಿಕೊಂಡು ಹೋಗಬಹುದಲ್ಲಾ ಅಂತ. 'ಅಗತ್ಯವಾಗಿ ಬನ್ನಿ' ಎಂದಿತು. ಆಗ ಹಲ್ಲಿ, ಅಳಿಲು ಸಂಗಡ ಹೊರಟುವು. ಆದರೆ ತುಸದೂರ ಹೋದಮೇಲೆ ಅವು ಬೆಕ್ಕಿನ ಕಣ್ಣಿಗೆ ಬೀಳಲಿಲ್ಲ. ಆಗ ಬೆಕ್ಕುಭಾವ 'ಅಯ್ಯೋ ಇದೇನು, ಪುಣ್ಯ ಪಡೆಯಲು ಹೊರಟರೆ ಶಾಪ ಸುತ್ತಿಕೊಂಡಿತಲ್ಲಾ' ಎಂದು ತುಂಬಾ ವ್ಯಾಕುಲ ಹೊಂದಿತು. ಮಕ್ಕಳೇ, ಆ ಹಲ್ಲಿ ಮತ್ತು ಅಳಿಲನ್ನು ನೀವೇನಾದರೂ ಕಂಡು ಹಿಡಿದು ತಿಳಿಸಿದರೆ ಬೆಕ್ಕುಭಾವನಿಗೆ ಬಹಳ ಸಹಾಯ ಮಾಡಿದವರಾಗುವಿರಿ.

# ಹಿಂಬದಿಯ ಚಿತ್ರ

ಅತ್ಯದ್ಭುತವಾದ ಈ ಕಥೆಯನ್ನು ಕೇಳುತ್ತಲೇ ಸದಯಸೇನನು ಸ್ವಲ್ಪಹೊತ್ತು ನಿಬ್ಬೆರಗಾಗಿ ನಿಂತನು. ಇಷ್ಟುದಿನ ತನ್ನನ್ನು ಪ್ರೀತಿಯಿಂದ ಆದರಿಸಿದ ಆ ಬಿಳೀ ಬೆಕ್ಕು ಈ ಭುವನೈಕ ಸುಂದರಿ ಎಂಬುದನ್ನರಿತು, ಆತನು ಆಶ್ಚರ್ಯದ ಕಡಲಲ್ಲಿ ತೇಲಾಡಿದನು. ಇನ್ನು ತನ್ನ ತಂದೆಯ ಕೋರಿಕೆ ಈಡೇರಿದಂತೆಯೇ ಎಂದು ನೆನೆದು ಉಬ್ಬಿಹೋದನು.

ನಂತರ ಸದಯಸೇನನೂ ರತ್ನಮಾಲೆಯೂ ಕಲೆತು ಆ ಭವನದೊಳಗೆ ತಿರುಗಾಡಿದಾಗ, ಶಾಪ ವಿಮೋಚನೆ ಹೊಂದಿದ ರತ್ನಮಾಲೆಯ ಪರಿವಾರವೂ ಅವರನ್ನು ಎದುರುಗೊಂಡು ಬಂದರು. ತಮ್ಮ ಪ್ರೀತಿಯ ರಾಜಕುಮಾರಿ ನಿಜ ರೂಪದಿಂದ ಪ್ರತ್ಯಕ್ಷವಾದುದನ್ನು ನೋಡಿ ಅವರೆಲ್ಲರಿಗೂ ಹಿಡಿಸಲಾರದಷ್ಟು ಸಂತೋಷವಾಯಿತು. ಅವಳು ಸುಂದರ ಸುಕುಮಾರನಾದ ಸದಯಸೇನನನ್ನು ಒಲಿದಿರುವಳೆಂದೂ, ಅವನೇ ಈ ವಿಮೋಚನೆಗೆ ಕಾರಣನೆಂದೂ ತಿಳಿದು, ಎಲ್ಲರೂ ನಾಲ್ಕುಸುತ್ತೂ ಪ್ರತಿಧ್ವನಿಸುವಂತೆ ಜಯಜಯಕಾರ ಮಾಡಿದರು.

ಈಡಿಲ್ಲದ ಜೋಡಿಗಳಾದ ಅವರಿಬ್ಬರೂ ಅಲ್ಲಿಂದ ಹೊರಟರು. ಎಲ್ಲಿಯೂ ನಿಲ್ಲದೆ ನೇರಾಗಿ ಸದಯಸೇನನ ತಂದೆಯ ರಾಜ್ಯವನ್ನು ಸೇರಿದರು. ಆ ಸಮಯಕ್ಕೆ ಹಿರಿಯಣ್ಣಂದಿರಿಬ್ಬರೂ ಒಬ್ಬೊಬ್ಬ ಸುಂದರಿಯನ್ನು ಕರೆದುಕೊಂಡು ಬಂದಿದ್ದರು. ಆದರೆ ರತ್ನಮಾಲೆಯ ಸೌಂದರ್ಯದ ಮುಂದೆ ಆ ಸ್ತ್ರೀಯರ ಅಂದಚೆಂದಗಳು ಮಂಗಿದಂತೆ ಕಂಡುವು.

ರತ್ನಮಾಲೆಯಂತಹ ಸುಂದರಿ ಮೂರುಲೋಕದಲ್ಲಿಯೂ ಇಲ್ಲವೆಂದು ಎಲ್ಲರೂ ತೀರ್ಮಾನಿಸಿದರು. ಪ್ರಜೆಗಳ ಉದ್ದೇಶಕ್ಕೆ ವಿರೋಧವಾದೀತೆಂದು ರಾಜ ಮತ್ತೇನೂ ಹೇಳದಾದ. ತನ್ನ ಮೂವರು ಮಕ್ಕಳೂ ಕರೆದುಕೊಂಡು ಬಂದ ಸುಂದರಿಯರನ್ನು, ಆಯಾ ಮಗಂದಿರಿಗೇ ಮದುವೆ ಮಾಡಿಸಿ, ರಾಜ್ಯವನ್ನೆಲ್ಲಾ ಸದಯಸೇನನಿಗೇ ಕೊಡಬೇಕೆಂದು ರಾಜ ನಿಶ್ಚಯಿಸಿದ.

ಆದರೆ ಸುಗುಣಖನಿಯಾದ ರತ್ನಮಾಲೆ ಆ ಏರ್ಪಾಡಿಗೆ ಒಪ್ಪಲಿಲ್ಲ. ರಾಜ್ಯವನ್ನು ಸರಿ ಮೂರುಭಾಗ ಮಾಡಿ ಮೂವರಿಗೂ ಹಂಚಿಕೊಡಬೇಕೆಂದು ನ್ಯಾಯವನ್ನು ಹೇಳಿದಳು. ರಾಜನೂ, ಪ್ರಜೆಗಳೂ ಸೈ ಸೈ ಎಂದರು. ಹಾಗೇ ಮೂವರು ರಾಜಕುಮಾರರಿಗೂ ಮದುವೆಯಾಗಿ ರಾಜ್ಯವಾಳುತ್ತಾ ಸುಖವಾಗಿದ್ದರು.

## ಬೆಳಗಿಸುವಾತನು ಯಾರಮ್ಮ?

ಬಾನೊಳು ಸೂರ್ಯನ ಚಂದಿರಮಾಮನ
ಬೆಳಗಿಸುವಾತನು ಯಾರಮ್ಮ?
ಇರುಳಲಿ ಹೊಳೆಯುವ ಚುಕ್ಕೆಗಳೆಲ್ಲವ
ನಗಿಸುವ ನಾವನು ಹೇಳಮ್ಮ?

"ಚಿವ್‌ಚಿವ್" ಗುಟ್ಟುವ ಅಳಿಲಿನ ಬೆನ್ನಿಗೆ
ಗೆರೆಗಳ ನೆಳೆದವನಾರಮ್ಮ?
ಹಾರುವ ಗುಬ್ಬಿಯು ಕಣ್ಣಿಗೆ ಕಾಡಿಗೆ
ಹಚ್ಚಿದ ನಾವನು ಹೇಳಮ್ಮ?

ಉಲಿಯುವ ನಲಿಯುವ ಮಿಗ ಹಕ್ಕಿಗಳನು
ಪೋಷಿಸು ವಾತನು ಯಾರಮ್ಮ?
ಮಾಗಿದ ಹಣ್ಣೊಳು ಸವಿಯನು ತೀವಿದ
ಮಹಿಮನದಾವನು ಹೇಳಮ್ಮ?

ತೆಂಗಿನ ಕಾಯಿಯ ಒಳಗಡೆ ರುಚಿಕರ
ನೀರನು ತುಂಬಿದನಾರಮ್ಮ?
ಅರಳಿದ ಬಣ್ಣದ ಹೂವಿಗೆ ಪರಿಮಳ
ಪೂಸಿದನಾವನು ಹೇಳಮ್ಮ?

ಕುಣಿಯುವ ನವಿಲಿಗೆ ಬಣ್ಣದ ಗರಿಗಳ
ಮೆಚ್ಚನ್ನಿತ್ತವನಾರಮ್ಮ?
ಹಾಡುವ ಕೋಗಿಲೆ ಗುನ್ನತ ಕಂಠವ
ನಿತ್ತವನಾವನು ಹೇಳಮ್ಮ?

ಗಿಡಮರ ಹೊಲ ಬನವೆಲ್ಲಕು ಪಚ್ಚೆಯ
ಮಿರುಗನು ಕೊಟ್ಟವನಾರಮ್ಮ?
ಗಿರಿ ವನ ಕೆರೆ ತೊರೆ ಸಾಗರ ಸೃಷ್ಟಿಯ
ಶಿಲ್ಪಿಯದಾವನು ಹೇಳಮ್ಮ?

ಪ.—ಸೀತಾರಾಮಭಟ್ಟ, ಮೂಡುಬಿದಿರೆ

---

### 'ಉತ್ತರಹೇಳು' ಉತ್ತರ

1. ಗ್ರೀಲಾಂಡು. 2. ಸಿಂಧು. 3. ರಷ್ಯಾ. 4. ಚೈನಾ. 5. ಮೋರ್ಸ್. 6. ಹರಿಹರ.

## ಫೋಟೋ ಶೀರ್ಷಿಕೆಯ ಸ್ಪರ್ಧೆ

ಜೂಲೈ ಫೋಟೋಗಳ ಫಲಿತಾಂಶ:

ಜೂಲೈ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆ ಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀರ್ಷಿಕೆ:

ಮೊದಲನೇ ಫೋಟೋ:

ಶುದ್ಧೀಕರಿಸುತ್ತಾ

ಎರಡನೇ ಫೋಟೋ:

ಸುಧಾರಿಸಿಕೊಳ್ಳುತ್ತಾ

ಕಳಿಸಿದವರು:

ಬಿ. ಎನ್. ನಾಗೇಂದ್ರ

ಶೇಷಾದ್ರಿಪುರಂ, ಬೆಂಗಳೂರು 3.

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಜೂಲೈ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಜೂಲೈ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

### ಆಗಸ್ಟ್ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

---

### ಮುಖ್ಯ ಸೂಚನೆ:

ನೀವು ಕಳುಹಿಸುವ ಶೀರ್ಷಿಕೆಗಳನ್ನು ಆಚೆಯ ಪುಟದ ಕೂಪನಿನಲ್ಲೇ ಬರೆದು ಕಳಿಸಬೇಕು. ಅದನ್ನು ಕತ್ತರಿಸಿ ಕವರಿನಲ್ಲಿಹಾಕಿ ಬುಕ್‌ಪೋಸ್ಟ್ ಮೂಲಕ ಕಳಿಸಿ. ಪತ್ರವೇನೂ ಇಡಬೇಡಿ.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1953 ಆಗಸ್ಟ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





★ ಮೇಲಿನ ಎರಡು ಫೋಟೋಗಳಿಗೆ ಸರಿ ಹೋಗುವ ಶೀರ್ಷಿಕೆಗಳು ಬೇಕು. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು. ಎರಡು ಫೋಟೋಗಳಿಗೂ ಸಂಬಂಧಿಸಿದ ಮಾತಾಗಿರಬೇಕು.

★ ಜೂನ್ 10ನೇ ತಾರೀಕಿನೊಳಗೆ ಶೀರ್ಷಿಕೆಗಳು ನಮಗೆ ಸೇರಬೇಕು. ಆಮೇಲೆ ಬಂದವುಗಳನ್ನು ಖಂಡಿತ ಪರಿಶೀಲಿಸಲಾಗದು.

★ ನಮಗೆ ಬಂದ ವಾಕ್ಯಗಳಲ್ಲಿ ಅತ್ಯುತ್ತಮವಾದ ಒಂದು ಜತೆ (ಅಂದರೆ ಎರಡು ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುತ್ತದೆ.

★ ಕೆಳಗಿನ ಕೂಪನ್‌ನಲ್ಲಿ ಎರಡು ಶೀರ್ಷಿಕೆಗಳನ್ನು ಬರೆದು ತುಂಬಿಸಿ, ಈ ವಿಳಾಸಕ್ಕೆ ಕಳಿಸಬೇಕು: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸ-26.

★ ಚಂದಮಾಮ ಕೂಪನ್ ಹೊರತು ಬೇರೆ ವಿಧವಾಗಿ ಕಳಿಸುವ ಶೀರ್ಷಿಕೆಗಳು ಖಂಡಿತ ಸ್ವೀಕರಿಸಲ್ಪಡುವುದಿಲ್ಲ.

———→ ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಕೂಪನ್ ←———

ಮೊದಲನೇ ಫೋಟೋ — ಎರಡನೇ ಫೋಟೋ

ಶೀರ್ಷಿಕೆ.................................. ಶೀರ್ಷಿಕೆ..................................

ಕಳಿಸಿದವರ ಹೆಸರು..........................................................................

ಪೂರ್ಣ ವಿಳಾಸ..............................................................................

August '53

Photo by D. I. Chanthamian



ಬಹುಮಾನ
ಪಡೆದ ಶೀರ್ಷಿಕೆ

ಬಾನಿಗೆ ನಾವು

ಕಳಿಸಿದವರು:
ಮಿಸ್. ಪದ್ಮಾವತಿ ಕಾರಂತ್, ದ. ಕ.

